RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಏಪ್ರಿಲ್ ೧೮, ೨೦೧೩ (ಚೈತ್ರ ೨೮, ಶಕ ವರ್ಷ ೧೯೩೫)<br>**Bangalore, Thursday, April 18, 2013 ( Chaithra 28, Shaka Varsha 1935)** | ಸಂಚಿಕೆ ೧೬<br>**Issue 16** |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎ.ಎಸ್. ಮಾಲಗತ್ತಿ, ಪಿ.ಐ., ಡಿ.ಸಿ.ಐ.ಬಿ., ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ–5/45/2005–06 (ಓ.ಬಿ. ಸಂಖ್ಯೆ: 44/2012) ದಿನಾಂಕ: 19–4–2012
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 29–6–2012
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ–8/45/2005–06 ದಿನಾಂಕ: 09–8–2012
4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 135 ಸಿಎನ್‌ಎಸ್ 2012 ದಿನಾಂಕ: 06–12–2012

**ಪ್ರಸ್ತಾವನೆ:**

ಶ್ರೀ ಎ.ಎಸ್. ಮಾಲಗತ್ತಿ, ಪಿ.ಐ. ಇವರು ಡಿ.ಸಿ.ಐ.ಬಿ., ಹಾವೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ, ಕರ್ತವ್ಯಚ್ಯುತಿ ಎಸಗಿ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎ.ಎಸ್. ಮಾಲಗತ್ತಿ, ಪಿ.ಐ., ಡಿ.ಸಿ.ಐ.ಬಿ., ಹಾವೇರಿ ಜಿಲ್ಲೆ ಆದ ನಿಮಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 152 ಪೊಸಿಪ 2003, ದಿನಾಂಕ: 30–6–2005 ರಲ್ಲಿ ಸ್ವತಂತ್ರ ಪ್ರಭಾರ ಡಿವೈ.ಎಸ್.ಪಿ. ಹುದ್ದೆಗೆ ಮುಂಬಡ್ತಿ ನೀಡಲಾಗಿದ್ದು, ತದನಂತರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 426 ಪೊಸಿಪ 2007 ದಿನಾಂಕ: 22–12–07 ರಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ: 30–6–2005ನ್ನು ನಿಮ್ಮ ಮಟ್ಟಿಗೆ ರದ್ದುಪಡಿಸಿದ್ದು, ಪ್ರಧಾನ ಕಛೇರಿಯ ಹಿಂಬರಹ ಸಂಖ್ಯೆ: ಸಿಬಿ(5)/45/2005–06, ದಿನಾಂಕ: 27–12–2007ರಲ್ಲಿ ಸರ್ಕಾರದ ಅಧಿಸೂಚನೆಯಲ್ಲಿ ನಿಮ್ಮ ಮುಂಬಡ್ತಿಯನ್ನು ರದ್ದುಪಡಿಸಿರುವುದರಿಂದ ನಿಮ್ಮನ್ನು ಪಿಐ ಹುದ್ದೆಯಲ್ಲಿ ಮುಂದುವರೆಸಿ ಮುಂದಿನ ಸ್ಥಳ ನೇಮಕಾತಿಗಾಗಿ ಪೊಲೀಸ್ ಪ್ರಧಾನ ಕಚೇರಿ, ಬೆಂಗಳೂರಿನಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಲಾಗಿತ್ತು. ಮೇಲ್ಕಂಡ ಸರ್ಕಾರದ ಅಧಿಸೂಚನೆ ಹಾಗೂ ಪ್ರಧಾನ ಕಛೇರಿಯ ಹಿಂಬರಹ ಜಾರಿಗೊಳಿಸಲು ನೀವು ಕೇಂದ್ರ ಸ್ಥಾನದಲ್ಲಿ ಲಭ್ಯವಿಲ್ಲದ್ದರಿಂದ ನಿಯಮಾನುಸಾರ ಸದರಿ ಅಧಿಸೂಚನೆಯನ್ನು ನಿಮ್ಮ ಮನೆಯ ಭಾಗಿಲಿಗೆ ದಿನಾಂಕ: 28–12–2007 ರಂದು ಅಂಟಿಸಿ ಪಂಚನಾಮೆ ಮುಖಾಂತರ ಜಾರಿಗೊಳಿಸಲಾಗಿರುತ್ತದೆ. ಕೇಂದ್ರಸ್ಥಾನಕ್ಕೆ ಹಿಂದಿರುಗಿದ ಬಳಿಕ ನೀವು ಸರ್ಕಾರದ ಅಧಿಸೂಚನೆ ಹಾಗೂ ಪ್ರಧಾನ ಕಚೇರಿಯ ಹಿಂಬರಹದನ್ವಯ ಪ್ರಧಾನ ಕಛೇರಿ, ಬೆಂಗಳೂರಿನಲ್ಲಿ ಪಿಐ ಹುದ್ದೆಯಲ್ಲಿ ವರದಿ ಮಾಡಿಕೊಳ್ಳದೆ, ದಿನಾಂಕ: 28–12–07 ರಿಂದ ದಿನಾಂಕ: 06–4–2009 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ, ಮೇಲಾಧಿಕಾರಿಗಳ ಹಾಗೂ ಸರ್ಕಾರದ ಆದೇಶವನ್ನು ಉಲ್ಲಂಘಿಸುವ ಮೂಲಕ ನಿಮ್ಮ ಆಧ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತೆ, ಕರ್ತವ್ಯಚ್ಯುತಿ ಎಸಗಿ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರವು ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–4–2012ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಇವರ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ಒಂದು ಹಂತವನ್ನು ಒಂದು ವರ್ಷದವರೆಗೆ ಕೆಳಗಿಳಿಸಲಾಗಿದೆ, ದಂಡನೆಯ ಅವಧಿಯಲ್ಲಿ ಯಾವುದೇ ವೇತನ ಬಡ್ತಿಗಳಾಗಲಿ ಅಥವಾ ಪದೋನ್ನತಿಯನ್ನು ಪಡೆಯಲು ಅರ್ಹರಿರುವುದಿಲ್ಲ. ದಂಡನಾವಧಿಯನ್ನು ಪೂರ್ಣಗೊಂಡ ನಂತರ ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ಲಭ್ಯ ವಾರ್ಷಿಕ ವೇತನ ಬಡ್ತಿಯನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು. ದಿನಾಂಕ: 28–12–2007 ರಿಂದ 06–4–2009 ರವರೆಗಿನ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ ಸಂಬಳರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 65 ಪೊಸಿಅ 2012 ಬೆಂಗಳೂರು, ದಿನಾಂಕ: 18–12–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎಸ್. ಮಾಲಗತ್ತಿ, ಪಿ.ಐ., ಡಿ.ಸಿ.ಐ.ಬಿ., ಹಾವೇರಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರವು ದಿನಾಂಕ: 19–4–2012ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಕಲಂ 23(1)(ಎ)(i) ರನ್ವಯ ವಾಗ್ದಂಡನೆಯನ್ನು ವಿಧಿಸಿ, ದಿನಾಂಕ: 28–12–2007 ರಿಂದ 06–4–2009 ರವರೆಗಿನ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ ಸಂಬಳರಹಿತ ರಜೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.228

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ.ಕೆ. ಚೌಧರಿ, ಪಿ.ಐ. ಕಾಳಗಿ ವೃತ್ತ, ಗುಲ್ಬರ್ಗಾ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಪಿಆರ್/282/2008 (ಓ.ಬಿ. ಸಂಖ್ಯೆ: 573/2009 ದಿನಾಂಕ: 24–4–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/28/ಈವ/2009 (ಆ.ಪು. ಸಂಖ್ಯೆ: 678/ಈವ/2009) ದಿನಾಂಕ: 03–11–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08–7–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)46/2010–11 ದಿನಾಂಕ: 05–10–2012

**ಪ್ರಸ್ತಾವನೆ:**

ಶ್ರೀ ಪಿ.ಕೆ. ಚೌಧರಿ, ಪಿ.ಐ. ಕಾಳಗಿ ವೃತ್ತ, ಇವರು ಮಾಡಬೂಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ವಿಮುಖತೆ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಮಾಡಬೂಳ ಪೊಲೀಸ್ ಠಾಣೆ, ಗುನ್ನೆ ಸಂಖ್ಯೆ: 58/2006 ಕಲಂ 3 ಮತ್ತು 7 ಇಸಿ ಆಕ್ಟ್ ಪ್ರಕರಣದ ತನಿಖೆ ವಿಲೇವಾರಿಗೊಳಿಸುವಲ್ಲಿ ಸೂಕ್ತ ಮೇಲ್ವಿಚಾರಣೆ ಮಾಡದೆ ವಿಫಲರಾಗಿ ಕಾರ್ಯವಿಮುಖತೆ ಹಾಗೂ ನಿರ್ಲಕ್ಷ್ಯತನ ತೋರಿಸಿದರ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 24–4–2009ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 03–11–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ

ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಕಾರ್ಯ ವಿಮುಖತೆ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 125 ಪೊಸಿಅ 2010 ಬೆಂಗಳೂರು, ದಿನಾಂಕ: 01–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಕೆ. ಚೌಧರಿ, ಪಿ.ಐ. ಕಾಳಗಿ ವೃತ್ತ, ಮಾಡಬೂಳ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.363

S/C.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪುಲ್ಲಯ್ಯ, ರಾಠೋಡ್, ಪಿ.ಎಸ್.ಐ., ಯಲಗೇರಾ ಪೊಲೀಸ್ ಠಾಣೆ, ಹಾಲಿ ದೇವದುರ್ಗ ಸಂಚಾರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/11/ಈವ/2010 (ಆ.ಪು. ಸಂಖ್ಯೆ: 121/ಈವ/2011/779) ದಿನಾಂಕ: 08–3–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)32/2011–12 (ಓ.ಬಿ. ಸಂಖ್ಯೆ: 35/2011–12) ದಿನಾಂಕ: 24–12–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–5–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)14/2012–13 ದಿನಾಂಕ: 23–5–2012 & 29–8–2012

**ಪ್ರಸ್ತಾವನೆ:**

ಶ್ರೀ ಪುಲ್ಲಯ್ಯ, ರಾಠೋಡ್, ಪಿ.ಎಸ್.ಐ., ಯಲಗೇರಾ ಪೊಲೀಸ್ ಠಾಣೆ, ಇವರು ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ದುರ್ನಡತೆ ಎಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ದಿನಾಂಕ: 09-01–2010 ರಂದು ಬೆಳಗಿನ ಜಾವ 04–00 ರಿಂದ 05–00 ಅವಧಿಯ ಸುಮಾರಿಗೆ ಶ್ರೀ ತಾಯಣ್ಣ ತಂದೆ ತಿಮ್ಮಪ್ಪ ಸಾ: ಮಂಜರ್ಲಾ ಗ್ರಾಮ ಮತ್ತು ಇತರೆ 07–08 ಜನರು ಮಂಜಾರ್ಲ ಸೀಮಾದಲ್ಲಿರುವ ಉಪ–ಕಾಲುವೆ ನಂ 104 (ಎ)ರ ನೀರಿನ ನಿರ್ವಹಣೆ ನೋಡಿಕೊಳ್ಳಲು ಕಾಲುವೆ ಹತ್ತಿರ ಮಲಗಿರುವಾಗ ನೀವು ಸರ್ಕಾರಿ ಜೀಪಿನಲ್ಲಿ ಹೋಗಿ ಕಾಲುವೆ ಹತ್ತಿರ ಮಲಗಿರುವ ರೈತರಾದ ತಾಯಣ್ಣ ಮತ್ತು ಇತರೇ 7–8 ಜನ ರೈತರಿಗೆ ವಿನಾಕಾರಣ ಅವಾಚ್ಯವಾಗಿ ಬೈಯುತ್ತ ಲಾಠಿಯಿಂದ ಹೊಡೆದು ಗಾಯಗೊಳಿಸಿ ತಾಯಣ್ಣ ಇವರ ಮೊಣಕಾಲಿನ ಕೆಳಗೆ ಎಡಗಾಲಿಗೆ ಒಳಪೆಟ್ಟು ಮಾಡಿ ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–3–11ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಎರಡು ವರ್ಷ ಕಾಲ ಮುಂದೂಡಿ, ಇವರ ದಿನಾಂಕ: 10–01–10 ರಿಂದ 28–5–10ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24–12–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 51 ಪೊಸಿಅ 2012 ಬೆಂಗಳೂರು, ದಿನಾಂಕ: 01–02–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪುಲ್ಲಯ್ಯ, ರಾಠೋಡ್, ಪಿ.ಎಸ್.ಐ., ಯಲಗೇರಾ ಪೊಲೀಸ್ ಠಾಣೆ, ಹಾಲಿ ದೇವದುರ್ಗ ಸಂಚಾರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.364**

**S/C.30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿ. ಸೋಮಶೇಖರ, ಪಿ.ಎಸ್.ಐ., ರಾಬರ್ಟ್‌ಸನ್‌ಪೇಟೆ ಪೊಲೀಸ್ ಠಾಣೆ, ಕೆ.ಜಿ.ಎಫ್., ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್., ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)/ಶಿಕ್ಷೆ/70/2008 (ಓ.ಬಿ. ಸಂಖ್ಯೆ: 25/2009) ದಿನಾಂಕ: 19–01–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/38/ಪನ್ನಿ/2009 (ಓ.ಬಿ. ಸಂಖ್ಯೆ: 55/2010–11) ದಿನಾಂಕ: 23–6–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29–11–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)79/2010–11 ದಿನಾಂಕ: 06–6–2012

**ಪ್ರಸ್ತಾವನೆ:**

ಶ್ರೀ ವಿ. ಸೋಮಶೇಖರ, ಪಿ.ಎಸ್.ಐ., ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ಸಲ್ಲಿಸುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಸದರಿ ಠಾಣೆಯ ಎಂ.ಓ.ಬಿ. ಕಾರ್ಡ್‌ಗಳನ್ನು ಸಮರ್ಪಕವಾಗಿ ನಿರ್ವಹಿಸದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿ ಕರ್ತವ್ಯ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್., ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–01–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ದಕ್ಕೆಯಾಗದಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 23–6–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 188 ಪೊಸಿಅ 2010 ಬೆಂಗಳೂರು, ದಿನಾಂಕ: 26–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ಸೋಮಶೇಖರ, ಪಿ.ಎಸ್.ಐ., ರಾಬರ್ಟ್‌ಸನ್‌ಪೇಟೆ ಪೊಲೀಸ್ ಠಾಣೆ, ಕೆ.ಜಿ.ಎಫ್., ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.225**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ರಾಮಬಾಬು, ಆರ್.ಎಸ್.ಐ., ಡಿ.ಎ.ಆರ್. ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಪಿಆರ್/94//2009 (ಓ.ಬಿ. ಸಂಖ್ಯೆ: 833/2009) ದಿನಾಂಕ: 22–05–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/26/ಈವ/2009 (ಅ.ಪು. ಸಂಖ್ಯೆ: 685/ಈವ/2009) ದಿನಾಂಕ: 02–11–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 05–02–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)84/2009–10 ದಿನಾಂಕ: 21–6–2012

**ಪ್ರಸ್ತಾವನೆ:**

ಶ್ರೀ ರಾಮಬಾಬು, ಆರ್.ಎಸ್.ಐ. ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಗುಲ್ಬರ್ಗಾ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಮೇಲಾಧಿಕಾರಿಗಳ ಜೊತೆ ಅನುಚಿತವಾಗಿ ವರ್ತಿಸಿ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ: 22–02–2009 ರಂದು ಮಾನ್ಯ ಕರ್ನಾಟಕ ರಾಜ್ಯದ ವಿರೋಧ ಪಕ್ಷದ ನಾಯಕರ ಬೆಂಗಾವಲು ಕರ್ತವ್ಯಕ್ಕೆ ನೇಮಿಸಲಾಗಿತ್ತು ಆದರೆ ನೀವು ತಡವಾಗಿ ಬಂದು ಮೇಲಾಧಿಕಾರಿಗಳ ಜೊತೆ ಅನುಚಿತವಾಗಿ ಮಾತನಾಡಿ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22–05–2009ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ 3 ತಿಂಗಳಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 02–11–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮೇಲಾಧಿಕಾರಿಗಳ ಜೊತೆ ಅನುಚಿತವಾಗಿ ವರ್ತಿಸಿ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 27 ಪೊಸಿಅ 2010 ಬೆಂಗಳೂರು, ದಿನಾಂಕ: 26–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಬಾಬು, ಎ.ಆರ್.ಎಸ್.ಐ, ಡಿ.ಎ.ಆರ್. ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.291

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಡಿ. ಅಶೋಕ, ಪಿ.ಐ., ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಡಿಇ(2)191/ಸಿಓಪಿ/ಆರ್–7/2010 ದಿನಾಂಕ: 27–9–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)114/2010–11 ದಿನಾಂಕ: 22–6–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21–7–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)114/2010–11 ದಿನಾಂಕ: 16–3–2012

**ಪ್ರಸ್ತಾವನೆ:**

ಶ್ರೀ ಡಿ. ಅಶೋಕ, ಪಿ.ಐ., ಇವರು ಬಾದಾಮಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಉದಾಸೀನತೆ, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಡಿ. ಅಶೋಕ, ಪಿ.ಐ., ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಈ ಹಿಂದೆ ಬಾದಾಮಿ ಪೊಲೀಸ್ ಠಾಣೆ, ಬಿಜಾಪುರ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬಾದಾಮಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಯಾವುದೇ ದೃಢೀಕರಣ ವೈದ್ಯ ಪ್ರಮಾಣ ಪತ್ರವಿಲ್ಲದೇ ವೈದ್ಯಕೀಯ ಚಿಕಿತ್ಸಾ ಕೇಂದ್ರ ನಡೆಸುತ್ತಿದ್ದ ಶ್ರೀ ವೈ.ಎಂ. ಹಡಪದ್ ರವರ ವಿರುದ್ಧ ಮೊ.ಸಂ. 123/06 ಕಲಂ 417, 419, 420 ರೆ.ವಿ 36, 38 ಕರ್ನಾಟಕ ಆಯುರ್ವೇದಿಕ್ & ಯನಾನಿ ಪ್ರಾಕ್ಟಿಷನರ್ ರಿಜಿಸ್ಟ್ರೇಷನ್ & ಮೆಡಿಕಲ್ ಪ್ರಾಕ್ಟಿಷನರ್ ಮಿಸೇಲೇನಿಯಸ್ ಆಕ್ಟ್–1961 ರಡಿಯಲ್ಲಿ ಮೊಕದ್ದಮೆ ದಾಖಲು ಮಾಡಿದ್ದು, ಈ ಪ್ರಕರಣದಲ್ಲಿ ತನಿಖಾಧಿಕಾರಿಯಾದ ನೀವು ತನಿಖೆಯಲ್ಲಿ ಉದಾಸೀನತೆ ತೋರಿದ್ದರಿಂದ ಸಿ.ಸಿ. ನಂ. 467/07 ನೇದ್ದರ ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಖುಲಾಸೆ–ಯಾಗಲು ಮತ್ತು ಕಟುಟೀಕೆಗೆ ಒಳಗಾಗಲು ಕಾರಣಕರ್ತರಾಗಿರುತ್ತೀರಿ. ಈ ರೀತಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾದ ನೀವು ತನಿಖೆಯನ್ನು ಸರಿಯಾಗಿ ನಡೆಸದೆ ನಿಮ್ಮ ಕರ್ತವ್ಯದಲ್ಲಿ ಉದಾಸೀನತೆ, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 27–9–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–6–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಉದಾಸೀನತೆ, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 86 ಪೊಸಿಅ 2011 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಅಶೋಕ, ಪಿ.ಐ., ವಿಧಾನಸೌಧ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.292**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ 1/2ನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/01/2012–13 ಡಿಆರ್‌ಡಿಎ(ಎಸ್‌ಎಲ್ ನಂ.10) ದಿನಾಂಕ 21–05–2012.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 07–06–2012 ಮತ್ತು 17–09–2012.
3. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 17–09–2012, 11.10.2012, 26.11.2012 ಮತ್ತು 6.12.2012
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/11/: 2012–13 ಡಿಆರ್‌ಡಿಎ(ಎಸ್‌ಎಲ್ ನಂ.41) ದಿನಾಂಕ 24–08–2012 ಮತ್ತು [ಎಸ್‌ಎಲ್ ನಂ.48] ದಿನಾಂಕ 15.11.2012
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–17014/11/: 2012–13 ಡಿಆರ್‌ಡಿಎ (ಎಸ್‌ಎಲ್‌ನಂ.75) ದಿನಾಂಕ 16.01.2013.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2012–13 ನೇ ಸಾಲಿಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ 22 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1) ಮತ್ತು (4)ರ ಪತ್ರಗಳಲ್ಲಿ ಒಂದನೇ ಕಂತಿನ ಅನುದಾನ ರೂ.7,81,05,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಒಂದನೇ ಕಂತಿನ ಅನುದಾನ ರೂ.2,60,34,000/–ಗಳನ್ನು ಓದಲಾಗಿದೆ (3)ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

ಓದಲಾಗಿದೆ (5) ರ ಆದೇಶದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13 ನೇ ಸಾಲಿಗೆ ಒಂದನೇ / ಎರಡನೇ ಕಂತಿನ ಅನುದಾನವಾಗಿ 6 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.1,70,08,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಒಂದನೇ/ ಎರಡನೇ ಕಂತಿನ ಅನುದಾನವಾಗಿ ಸದರಿ 6 ಜಿಲ್ಲಾ ಪಂಚಾಯತಿಗಳಿಗೆ ರೂ.56,71,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 12.02.2013**

**ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2012–13 ನೇ ಸಾಲಿನಲ್ಲಿ ಒಂದನೇ/ಎರಡನೇ ಕಂತಿನ ಅನುದಾನವಾಗಿ 6 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.56,71,000/– ಗಳನ್ನು (ಐವತ್ತಾರು ಲಕ್ಷದ ಎಪ್ಪತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ ಷರತ್ತುಗೊಳ ಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.**

(ರೂ.ಗಳಲ್ಲಿ)

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2012–13 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ /ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ / ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಚಾಮರಾಜನಗರ [1ನೇ ಕಂತು] | 456 | 1000ZZ0001 | 31,40,000 | 10,47,000 |
| 2 | ಕೋಲಾರ [1ನೇ ಕಂತು] | 404 | 0700ZZ8002 | 31,40,000 | 10,47,000 |
| 3 | ಕೊಡಗು [1ನೇ ಕಂತು] | 411 | 1200ZZ0001 | 31,40,000 | 10,47,000 |
| 4 | ಯಾದಗಿರಿ [1ನೇ ಕಂತು] | 421 | 3300ZZ0001 | 31,40,000 | 10,47,000 |
| 5 | ಉತ್ತರ ಕನ್ನಡ [1ನೇ ಕಂತು] | 416 | 3000ZZ0080 | 29,16,000 | 9,72,000 |
| 6 | ಧಾರವಾಡ [2ನೇ ಕಂತು] | 415 | 2500ZZ8798 | 15,32,000 | 5,11,000 |
| ಒಟ್ಟು | | | | 1,70,08,000 | 56,71,000 |

**ಷರತ್ತುಗಳು :**

**ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.**

**ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6– ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2012–2013 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ**

**30-03-2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.**

**ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.**

**ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.**

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

**ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.**

**ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 84 ಪಿಬಿಎಸ್ 2013 ದಿನಾಂಕ: 07.02.2013ರಂತೆ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪ**
ನಿರ್ದೇಶಕರು (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.257**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012-13ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ 9 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ 1/2ನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್-17014/01/2012-13 ಡಿಆರ್‌ಡಿಎ(ಎಸ್‌ಎಲ್ ನಂ.10) ದಿನಾಂಕ 21-05-2012.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 07-06-2012 ಮತ್ತು 17-09-2012.
3. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 17-09-2012, 11.10.2012, 26.11.2012, 6.12.2012 ಮತ್ತು 12.02.2013
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014/11/: 2012-13 ಡಿಆರ್‌ಡಿಎ(ಎಸ್‌ಎಲ್ ನಂ.41) ದಿನಾಂಕ 24-08-2012, [ಎಸ್‌ಎಲ್ ನಂ.48] ದಿನಾಂಕ 15.11.2012 ಮತ್ತು (ಎಸ್‌ಎಲ್‌ನಂ.75) ದಿನಾಂಕ 16.01.2013.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/11/: 2012-13 ಡಿಆರ್‌ಡಿಎ [ಎಸ್‌ಎಲ್.ನಂ.109] ದಿನಾಂಕ 28.02.2013.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2012-13ನೇ ಸಾಲಿಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ 27 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1) ಮತ್ತು (4)ರ ಪತ್ರಗಳಲ್ಲಿ ಒಂದನೇ ಕಂತಿನ ಅನುದಾನ ರೂ.9,35,81,000/- ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಒಂದನೇ ಕಂತಿನ ಅನುದಾನ ರೂ.3,11,94,000/-ಗಳನ್ನು ಓದಲಾಗಿದೆ (3)ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ. ಕೇಂದ್ರ ಸರ್ಕಾರವು ಧಾರವಾಡ ಜಿಲ್ಲಾ ಪಂಚಾಯತ್‌ಗೆ ಎರಡನೇ ಕಂತಿನ ಅನುದಾನ ರೂ.15,32,000/- ದಿನಾಂಕ 16.01.2013ರ ಪತ್ರದಲ್ಲಿ ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.5,11,000/- ದಿನಾಂಕ 12.02.2013ರ ಆದೇಶದಂತೆ ಬಿಡುಗಡೆ ಮಾಡಿದೆ.

ಓದಲಾಗಿದೆ (5) ರ ಪತ್ರದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012-13ನೇ ಸಾಲಿಗೆ ಒಂದನೇ ಕಂತಿನ ಅನುದಾನವನ್ನು ಚಿಕ್ಕಮಗಳೂರು, ಕೊಪ್ಪಳ ಜಿಲ್ಲಾ ಪಂಚಾಯತಿಗಳಿಗೆ ಹಾಗೂ ಎರಡನೇ ಕಂತಿನ ಅನುದಾನವನ್ನು ಬೆಂಗಳೂರು ನಗರ, ಬಿಜಾಪುರ, ಚಿತ್ರದುರ್ಗ, ದಕ್ಷಿಣ ಕನ್ನಡ, ಮಂಡ್ಯ, ಮೈಸೂರು ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.1,78,72,000/-ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಒಂದನೇ/ ಎರಡನೇ ಕಂತಿನ ಅನುದಾನವಾಗಿ ಸದರಿ 9 ಜಿಲ್ಲಾ ಪಂಚಾಯತಿಗಳಿಗೆ ರೂ.59,57,000/-ಗಳನ್ನು ಬಿಡುಗಡೆ ಮಾಡಬೇಕಾಗಿದೆ.

ಶಿವಮೊಗ್ಗ ಜಿಲ್ಲಾ ಪಂಚಾಯತ್‌ಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರೂ.19,81,000/- ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.6,60,000/- ಬಿಡುಗಡೆ ಮಾಡಬೇಕಿದೆ. ಆದರೆ,2012-13 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಹಂಚಿಕೆಯಾದ ಅನುದಾನವನ್ನು ಈಗಾಗಲೇ ಪೂರ್ಣವಾಗಿ ಜಿಲ್ಲೆಗೆ ಬಿಡುಗಡೆ ಮಾಡಿರುವುದರಿಂದ, ಕೇಂದ್ರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ

ಅನುದಾನ ರೂ.6,60,000/–ಗಳನ್ನು ಲಭ್ಯತೆಯ ಕೊರತೆಯಿಂದಾಗಿ ಬಿಡುಗಡೆಗೊಳಿಸಲು ಸಾಧ್ಯವಾಗುತ್ತಿಲ್ಲ. ಶಿವಮೊಗ್ಗ ಜಿಲ್ಲಾ ಪಂಚಾಯತಿಯನ್ನು ಹೊರತುಪಡಿಸಿ ಉಳಿದ ಜಿಲ್ಲಾ ಪಂಚಾಯತಿಗಳಿಗೆ ರೂ.52,97,000/– ಮಾತ್ರ ಬಿಡುಗಡೆ ಮಾಡಬೇಕಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 19.03.2013**

**ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2012–13 ನೇ ಸಾಲಿನಲ್ಲಿ ಒಂದನೇ/ಎರಡನೇ ಕಂತಿನ ಅನುದಾನವಾಗಿ 9 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.52,97,000/– ಗಳನ್ನು (ಐವತ್ತೆರಡು ಲಕ್ಷ ತೊಂಬತ್ತೇಳು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ ಷರತ್ತುಗೊಳ ಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.**

ರೂ.ಗಳಲ್ಲಿ

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ.ಕೋಡ್ | 2012–13 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ /ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ / ಎರಡನೇ ಕಂತಿನ ಅನುದಾನ |
|---|---|---|---|---|---|
| 1. | ಚಿಕ್ಕಮಗಳೂರು [1ನೇ ಕಂತು] | 408 | 1800ZZ0017 | 38,92,000 | 12,97,000 |
| 2. | ಕೊಪ್ಪಳ [1ನೇ ಕಂತು] | 466 | 1500ZZ0010 | 31,40,000 | 10,47,000 |
| 3. | ಬೆಂಗಳೂರು ನಗರ [2ನೇ ಕಂತು] | 401 | 0100ZZ8001 | 29,69,000 | 9,90,000 |
| 4. | ಬಿಜಾಪುರ [2ನೇ ಕಂತು] | 414 | 2800ZZ9152 | 20,14,000 | 6,71,000 |
| 5. | ಚಿತ್ರದುರ್ಗ [2ನೇ ಕಂತು] | 403 | 1600ZZ0001 | 3,37,000 | 1,12,000 |
| 6. | ದಕ್ಷಿಣ ಕನ್ನಡ [2ನೇ ಕಂತು] | 409 | 1900ZZ0047 | 0 | 0 |
| 7. | ಮಂಡ್ಯ [2ನೇ ಕಂತು] | 412 | 1100ZZ0001 | 35,39,000 | 11,80,000 |
| 8. | ಮೈಸೂರು [2ನೇ ಕಂತು] | 407 | 0900ZZ0001 | 0 | 0 |
| 9. | ಶಿವಮೊಗ್ಗ [2ನೇ ಕಂತು] | 405 | 1400ZZ0002 | 19,81,000 | 0 *** |
| ಒಟ್ಟು | | | | 1,78,72,000 | 52,97,000 |

*** 2012–13ನೇ ಸಾಲಿಗೆ ರಾಜ್ಯದ ಅಯವ್ಯಯದಲ್ಲಿ ಒದಗಿಸಿದ ಅನುದಾನ ಪೂರ್ಣವಾಗಿ ಬಿಡುಗಡೆಗೊಳಿಸಲಾಗಿದೆ. ಅನುದಾನದ ಲಭ್ಯತೆ ಇಲ್ಲದ ಕಾರಣ ರಾಜ್ಯದ ಪಾಲಿನ ಅನುದಾನ ರೂ.6,60,000/– ಬಿಡುಗಡೆಗೊಳಿಸಲು ಸಾಧ್ಯವಾಗಿರುವುದಿಲ್ಲ.

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2012–2013 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 143 ಪಿಬಿಎಸ್ 2013 ದಿನಾಂಕ: 18.03.2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ದೀಪ**
ನಿರ್ದೇಶಕರು (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

PR.462
S/C.12

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಎಸ್‌ಜಿಎಸ್‌ವೈಯಡಿ 2012–13ನೇ ಸಾಲಿನಲ್ಲಿ ರಾಜ್ಯದ ಉಡುಪಿ ಜಿಲ್ಲಾ ಪಂಚಾಯತಿಗೆ ರಾಜ್ಯದ ಪಾಲಿನ 1ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಎಫ್‌ಟಿಎಸ್ ಫೈಲ್ಸ್ ನಂ.18080/2012 ಸಂಖ್ಯೆ:ಜೆ–20011/2/2012 ಎಸ್‌ಜಿಎಸ್‌ವೈ(1) ದಿನಾಂಕ 11.04.2012.
2. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ:ಜೆ–11060/7/2012 ಎಸ್‌ಜಿಎಸ್‌ವೈ (I)(12)ದಿನಾಂಕ 01.06.2012.
3. ಕೇಂದ್ರ ಸರ್ಕಾರದ ಅನುದಾನ ಜಮೆ ದಿನಾಂಕ 18.06.2012.
4. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿಯ ಆರ್‌ಎಲ್ –ಎಫ್‌ಟಿಎಸ್ 19407 ದಿನಾಂಕ 05.07.2012.
5. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ:ಆಇ 366 ವೆಚ್ಚ–06/2012 ದಿನಾಂಕ 26–09–2012, 26–11–2012 ಮತ್ತು 15.02.2013.
6. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 24 ಎಸ್‌ಜೆವೈ 2012 ಬೆಂಗಳೂರು, ದಿನಾಂಕ 10.08.2012.
7. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 43 ಎಸ್‌ಜೆವೈ 2012 ಬೆಂಗಳೂರು, ದಿನಾಂಕ 15.11.2012, ತಿದ್ದುಪಡಿ ಸಮ ಸಂಖ್ಯೆ ದಿನಾಂಕ 17.11.2012, ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ 12.12.2012 ಮತ್ತು 04.03.2013.
8. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ:ಜೆ–12022/4/2011 ಎಸ್‌ಜಿಎಸ್‌ವೈ (I)(11)ದಿನಾಂಕ 03.01.2013.
9. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ನವದೆಹಲಿ ಪತ್ರ ಸಂಖ್ಯೆ:ಜೆ–11022/2/2011 ಎಸ್‌ಜಿಎಸ್‌ವೈ–I (32) ದಿನಾಂಕ 31.12.2012.
10. ಆರ್ಥಿಕ ಇಲಾಖೆ [ವೆಚ್ಚ–6], ಬೆಂಗಳೂರು, ಇವರ ಸಂಖ್ಯೆ: ಆಇ 366 ವೆಚ್ಚ 6/2012 ದಿನಾಂಕ 12.03.2013.

**ಪ್ರಸ್ತಾವನೆ:**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಓದಲಾಗಿದೆ (1)ರಲ್ಲಿ ಎಸ್‌ಜಿಎಸ್‌ವೈ/ ಎನ್‌ಆರ್‌ಎಲ್‌ಎಂ ಯೋಜನೆ ಅನುಷ್ಠಾನಕ್ಕಾಗಿ ರೂ.1,17,02,67,000/– ಹಂಚಿಕೆ ಮಾಡಿದೆ. ಈ ಪೈಕಿ ಕೇಂದ್ರದ ಪಾಲು ರೂ.87,77,00,000/– ಹಾಗೂ ರಾಜ್ಯದ ಪಾಲು ರೂ.29,25,67,000/–. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಓದಲಾಗಿದೆ (2), (4) ಮತ್ತು (8) ರನ್ವಯ ರಾಜ್ಯದ 26 ಜಿಲ್ಲಾ ಪಂಚಾಯತ್‌ಗಳಿಗೆ ರೂ.39,74,85,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ರೂ.13,24,95,000/– ಬಿಡುಗಡೆ ಮಾಡಬೇಕಾಗಿದೆ. ಆದರೆ, 2012–13ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ಎಸ್‌ಜಿಎಸ್‌ವೈ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಯಾವುದೇ ಅನುದಾನವನ್ನು ಕಾಯ್ದಿರಿಸಿರುವುದಿಲ್ಲ. ಏಕೆಂದರೆ, ಕೇಂದ್ರ ಸರ್ಕಾರ 2012–13ನೇ ಸಾಲಿಗೆ ಎಸ್‌ಜಿಎಸ್‌ವೈ ಯೋಜನೆಯ ಬದಲಿಗೆ ಆಜೀವಿಕ (ಎನ್‌ಆರ್‌ಎಲ್‌ಎಂ) ಜಾರಿಗೆ ಬರುವುದಾಗಿ ತಿಳಿಸಿದ್ದರಿಂದ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2012–2013ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಯಾವುದೇ ಅನುದಾನ ಕಾಯ್ದಿರಿಸಿಕೊಂಡಿರುವುದಿಲ್ಲ. ಆದರೆ 2012–13ನೇ ಸಾಲಿಗೆ ಎಸ್‌ಜಿಎಸ್‌ವೈ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರವು ರಾಜ್ಯದ 26 ಜಿಲ್ಲಾ ಪಂಚಾಯತ್‌ಗೆ 1ನೇ ಕಂತಿನ ಅನುದಾನ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲೇಬೇಕಾಗಿರುತ್ತದೆ. ಆದ್ದರಿಂದ ಎಸ್‌ಜಿಎಸ್‌ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಕಾಯ್ದಿರಿಸಲಾಗಿರುವ ಅನುದಾನದಿಂದ ಬಿಡುಗಡೆ ಮಾಡಬೇಕಾಗಿದೆ.

ಎಸ್‌ಜಿಎಸ್ ವೈ ಯೋಜನೆ ಬದಲಿಗೆ ಜಾರಿಗೆ ಬಂದಿರುವ ಆಜೀವಿಕ (ಎನ್‌ಆರ್‌ಎಲ್‌ಎಂ) ಯೋಜನೆಗಾಗಿ ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ))

2012–2013 ನೇ ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05)ನಲ್ಲಿ 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒಟ್ಟಾರೆ ಅನುದಾನ ಬಿಡುಗಡೆಗಾಗಿ ರೂ.1,20,00,00,000/– ಕಾಯ್ದಿರಿಸಲಾಗಿದ್ದು, ಈ ಪೈಕಿ ರಾಜ್ಯದ ಪಾಲಿನ ಅನುದಾನ ಬಿಡುಗಡೆಗಾಗಿ ರೂ.30,00,00,000/–. ಆರ್ಥಿಕ ಇಲಾಖೆ ಓದಲಾಗಿದೆ (5) ರಲ್ಲಿ ರಾಜ್ಯ ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ರೂ. 13,24,95,000/– ಒದಗಿಸಿತ್ತು. ಈ ಅನುದಾನವನ್ನು ಕೇಂದ್ರ ಸರ್ಕಾರ 26 ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿದ್ದ ರೂ. 39,74,85,000/–ಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ರೂ. 13,24,95,000/– ಬಿಡುಗಡೆ ಮಾಡಲಾಗಿದೆ.

ಕೇಂದ್ರ ಸರ್ಕಾರ ಓದಲಾಗಿದೆ (9)ರಲ್ಲಿ ಉಡುಪಿ ಜಿಲ್ಲಾ ಪಂಚಾಯತ್‌ಗೆ 2012–13ನೇ ಒಂದನೇ ಕಂತಿನ ಅನುದಾನ ರೂ.75,68,.000/– ಬಿಡುಗಡೆ ಮಾಡಿದೆ. ಆರ್ಥಿಕ ಇಲಾಖೆ ಓದಲಾಗಿದೆ (10)ರಲ್ಲಿ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ರೂ.25,22,,000/– ಬಿಡುಗಡೆ ಮಾಡಲು ಸಹಮತಿ ನೀಡಿದೆ. ಇದರಂತೆ ಉಡುಪಿ ಜಿಲ್ಲಾ ಪಂಚಾಯತ್‌ಗೆ ರೂ.25,22,000/– ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 43 ಎಸ್‌ಜಿವೈ 2012, ಬೆಂಗಳೂರು, ದಿನಾಂಕ 19.03.2013**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2012–13ನೇ ಸಾಲಿಗೆ ರಾಜ್ಯದ ಉಡುಪಿ ಜಿಲ್ಲಾ ಪಂಚಾಯತ್‌ಗೆ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ರೂ. **25,22**,000/– (ಇಪ್ಪತ್ತೈದು ಲಕ್ಷದ ಇಪ್ಪತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ನಿಗದಿಪಡಿಸಿರುವ 300 lump sum ಅನುದಾನದಿಂದ ಭರಿಸಿ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**(ರೂ.ಗಳಲ್ಲಿ)**

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದೆ ಒಂದನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ ಕಂತಿನ ಅನುದಾನ |
|---|---|---|---|---|
| 1 | 2 | 3 | 4 | 5 |
| 1 | ಉಡುಪಿ | 2000ZZ0001 | 75,68,000 | 25,22,000 |

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ [ನ್ಯಾಷನಲ್ ರೂರಲ್ ಲೈವ್ಲಿ ಹುಡ್ ಪ್ರಾಜೆಕ್ಟ್ (ಎನ್‌ಆರ್‌ಎಲ್‌ಎಂ)] 2012–2013 ಲಿಂಕ್ ಕೋಡ್ 2501–01–198–6–01 "(ಹೊಸ ಕೋಡ್ 2501–00–101–0–05) ರಡಿ ಎನ್‌ಆರ್‌ಎಲ್‌ಎಂ ಅನುಷ್ಠಾನಕ್ಕಾಗಿ ರಾಜ್ಯದ ಆಯವ್ಯಯದಲ್ಲಿ 300 lump sum ನಲ್ಲಿ ಒದಗಿಸಿರುವ ಅನುದಾನದಿಂದ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಉಡುಪಿ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್‌ಜಿವೈ 2007 ದಿನಾಂಕ 18–04–2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು. ಇದಲ್ಲದೆ ಓದಲಾಗಿದೆ 6ರ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಸಹ ತಪ್ಪದೆ ಪಾಲಿಸುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2012–13ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಉಡುಪಿ ಜಿಲ್ಲಾ ಪಂಚಾಯತಿಯ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಉಡುಪಿ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 139 ಪಿಬಿಎಸ್ 2013 ದಿನಾಂಕ 15.03.2013 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೀಪ**
ನಿರ್ದೇಶಕರು (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR.463**
**S/C.12**

## ಕಂದಾಯ ಸಚಿವಾಲಯ

**ವಿಷಯ:–** ಬೀದರ್ ಜಿಲ್ಲೆಯ ಬೀದರ್ (ಉತ್ತರ) ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:–** ಸರ್ಕಾರದ ಆದೇಶ ಸಂಖ್ಯೆ: ಕಂಇ 55 ಮುಸರ 2009, ದಿನಾಂಕ:25–02–2009

**ಪ್ರಸ್ತಾವನೆ:–**

ಮೇಲೆ ಓದಲಾದ ಆದೇಶದಲ್ಲಿ ಬೀದರ್ ಜಿಲ್ಲೆಯ ಬೀದರ್ (ಉತ್ತರ) ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಬೀದರ್ (ಉತ್ತರ) ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೀದರ್ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೀದರ್ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಬೀದರ್ ತಾಲ್ಲೂಕು, ಬೀದರ್ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 77 ಮುಸರ 2011; ಬೆಂಗಳೂರು, ದಿನಾಂಕ: 23ನೇ ಜನವರಿ, 2013**

ಬೀದರ್ ಜಿಲ್ಲೆಯ ಬೀದರ್ (ಉತ್ತರ) ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಹಣಮಂತಪ್ಪ ಬಿನ್ ಲಿಂಗಪ್ಪಾ ಬೂಳ್ಳಾ, ಹಾರೂರ ಗೇರಿ, ಬೀದರ್ ಜಿಲ್ಲೆ | ಸಾಮಾನ್ಯ |
| 2 | ಶ್ರೀಮತಿ ಗೀತಾಬಾಯಿ ಬಾಹದೂರ, ಹಳ್ಳದಕೇರೆ, ಬೀದರ್ ತಾಲ್ಲೂಕು ಹಾಗೂ ಜಿಲ್ಲೆ | ಮಹಿಳೆ |
| 3 | ಶ್ರೀ ಸುನೀಲ್ ಕುಮಾರ್ ತಂದೆ ಮಾಣಿಕರಾವ್ ಸಾ :ವಾಲದೊಡ್ಡಿ, ಬೀದರ್ ಜಿಲ್ಲೆ | ಪರಿಶಿಷ್ಟ ಜಾತಿ |
| 4 | ಶ್ರೀ ಯಶವಂತ ಶರ್ಮಾ, ನಾವದಗೇರಿ ಗ್ರಾಮ, ಬೀದರ್ ತಾಲ್ಲೂಕು ಹಾಗೂ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶ್ರೀನಿವಾಸ ದೀಕ್ಷಿತ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

**PR.469**
**S/C.25**

## ಕಂದಾಯ ಸಚಿವಾಲಯ

**ವಿಷಯ:–** ಕೊಡಗು ಜಿಲ್ಲೆಯ ಮಡಿಕೇರಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:–** ಸರ್ಕಾರದ ಆದೇಶ ಸಂಖ್ಯೆ: ಕಂಇ 47 ಮುಸರ 2009, ದಿನಾಂಕ:25–02–2009

**ಪ್ರಸ್ತಾವನೆ:–**

ಮೇಲೆ ಓದಲಾದ ಆದೇಶದಲ್ಲಿ ಕೊಡಗು ಜಿಲ್ಲೆಯ ಮಡಿಕೇರಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮಡಿಕೇರಿ ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಡಗು ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸೋಮವಾರಪೇಟೆ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 10 ಮುಸರ 2011; ಬೆಂಗಳೂರು, ದಿನಾಂಕ: 29ನೇ ಜನವರಿ, 2013**

ಕೊಡಗು ಜಿಲ್ಲೆ, ಮಡಿಕೇರಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಸುರೇಶ್ ಸುಂಟಿ ಗ್ರಾಮ, ಗೌಡಳ್ಳಿ ಅಂಚೆ, ಸೋಮವಾರ ಪೇಟೆ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಶೋಭಾ ಶಿವರಾಜ್ ಕೋಂ ಶಿವರಾಜ್, ಬಸವೇಶ್ವರ ರಸ್ತೆ, ಸೋಮವಾರ ಪೇಟೆ ತಾಲ್ಲೂಕು | ಮಹಿಳೆ |
| 3 | ಶ್ರೀ ಸಿ.ಡಿ. ರಂಗಯ್ಯ ಬಿನ್ ದೊಡ್ಡಯ್ಯ,<br>ಚೌಡೇನಹಳ್ಳಿ ಗ್ರಾಮ, ನಿಡ್ತ ಅಂಚೆ, ಶನಿವಾರ ಸಂತೆ ಹೋಬಳಿ, ಸೋಮವಾರಪೇಟೆ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಪಿ.ಎಸ್. ಜಯಂತ್ ಬಿನ್ ಸಂಜೀವರಾವ್, ಕಂಬಿಬಾಣೆ, ಸೋಮವಾರಪೇಟೆ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.465**
**S/C.25**

## ಕಂದಾಯ ಸಚಿವಾಲಯ

**ವಿಷಯ:–** ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ಟೌನ್, ಮೇಗಲಪೇಟೆಯಲ್ಲಿರುವ ಶ್ರೀ ಆಂಜನೇಯಸ್ವಾಮಿ (ಹನುಮಂತ ದೇವರು) ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡಿಸುವ ಕುರಿತು.

**ಓದಲಾಗಿದೆ:** (1) ರಾಜ್ಯ ಧಾಮಿಕ ಪರಿಷತ್ತಿನ ನಡವಳಿ ದಿನಾಂಕ:07–08–2012

(2) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 11/2012–13 ದಿನಾಂಕ:11–12–2012

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರ ದಿನಾಂಕ:11–12–2012ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ಟೌನ್, ಮೇಗಲಪೇಟೆಯಲ್ಲಿರುವ ಶ್ರೀ ಆಂಜನೇಯಸ್ವಾಮಿ (ಹನುಮಂತ ದೇವರು) ದೇವಾಲಯಕ್ಕೆ ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ತಮ್ಮ ಆದೇಶ ಸಂಖ್ಯೆ: ಡಿವಿಎಸ್(ಬಿ).ಸಿಆರ್.13/2011–12 ದಿನಾಂಕ:26–03–2012ರನ್ವಯ ವಾರ್ಷಿಕ `.739/– ತಸ್ಥೀಕ್ ಭತ್ಯೆಯನ್ನು ನಿಗಧಿಪಡಿಸಿರುತ್ತಾರೆ. ಇದರಿಂದಾಗಿ ಈ ದೇವಾಲಯವು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ಸೆಕ್ಷನ್ 23(ಎ)(ii)ರನ್ವಯ ಅಧಿಸೂಚಿತ ಸಂಸ್ಥೆಯಾಗಿ ಪ್ರಕಟಿಸಬೇಕಾಗಿದೆ ಎಂದು ತಿಳಿಸಿರುತ್ತಾರೆ. ಸದರಿ ಪ್ರಸ್ತಾವನೆಯ ಬಗ್ಗೆ ದಿನಾಂಕ:07–08–2012ರಂದು ನಡೆದ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲು ನಿರ್ಣಯಿಸಲಾಗಿರುವುದರಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ಟೌನ್, ಮೇಗಲಪೇಟೆಯಲ್ಲಿರುವ ಶ್ರೀ ಆಂಜನೇಯಸ್ವಾಮಿ (ಹನುಮಂತ ದೇವರು) ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ಸೆಕ್ಷನ್ 23(ಎ)(ii)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಿ ಆದೇಶ ಹೊರಡಿಸುವಂತೆ ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿರುವರು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 93 ಮುಅಬಿ 2012; ಬೆಂಗಳೂರು, ದಿನಾಂಕ: 29ನೇ ಜನವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ಟೌನ್, ಮೇಗಲಪೇಟೆಯಲ್ಲಿರುವ ಶ್ರೀ ಆಂಜನೇಯಸ್ವಾಮಿ (ಹನುಮಂತ ದೇವರು) ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, (1997) ಸೆಕ್ಷನ್ 23(ಎ)(ii)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.468**
**S/C.150**

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯ ಹುಕ್ಕೇರಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಮುಸರ 2009, ದಿನಾಂಕ:25–02–2009

**ಪ್ರಸ್ತಾವನೆ:–**

ಮೇಲೆ ಓದಲಾದ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಹುಕ್ಕೇರಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಹುಕ್ಕೇರಿ ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಳಗಾವಿ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಹುಕ್ಕೇರಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 54 ಮುಸರ 2011; ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್, 2012**

ಬೆಳಗಾವಿ ಜಿಲ್ಲೆಯ ಹುಕ್ಕೇರಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ. ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಶಿವನಗೌಡಾ ಸತ್ಯೆಪ್ಪಾ ಮದವಾಲ ಸುಲ್ತಾನಪೂರ, ಹುಕ್ಕೇರಿ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಲಲೀತಾ ಪ್ರದೀಪ ಪಾಟೀಲ ಅಮ್ಮಣಗಿ, ಹುಕ್ಕೇರಿ ತಾಲ್ಲೂಕು | ಮಹಿಳೆ |
| 3 | ಶ್ರೀ ಜಿತೇಂದ್ರ ಗುರುಪಾದ ತಳವಾರ, ಮದಿಹಳ್ಳಿ, ಹುಕ್ಕೇರಿ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಚಂದ್ರಕಾಂತ ಶಂಕರ ನಾಯಿಕ, ಹೊನ್ನಿಹಳ್ಳಿ, ಹುಕ್ಕೇರಿ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**PR.464**
**S/C.25**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು, ಸೋಂಪುರ ನರಸೀಪುರ ಗ್ರಾಮದ ಶ್ರೀ ಆತ್ಮಾರಾಮಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಯ ಪಟ್ಟಿಯಲ್ಲಿ ಸೇರಿಸುವ ಕುರಿತು

**ಓದಲಾಗಿದೆ:** (1) ರಾಜ್ಯ ಧಾರ್ಮಿಕ ಪರಿಷತ್ತಿನ ನಡವಳಿ ದಿನಾಂಕ:26.09.2012

(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಎಡಿಎಂ 05 ಸಿಆರ್ 40/2009–10 ದಿನಾಂಕ:03.08.2012 ಮತ್ತು 20.10.2012

**ಪ್ರಸ್ತಾವನೆ:–**

ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ, ಬೆಂಗಳೂರ ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿಯ ನರಸೀಪುರ ಗ್ರಾಮದ ಶ್ರೀ ಆತ್ಮಾರಾಮಸ್ವಾಮಿ ದೇವಾಲಯದ ಆಡಳಿತವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆಯು ಪ್ರಾರಂಭವಾದ ದಿನಾಂಕದಂದೇ ಈ ಹಿಂದಿನ ಮೈಸೂರು ಮತೀಯ ಮತ್ತು ಧರ್ಮಾರ್ಥ ಸಂಸ್ಥೆಗಳು ಅಧಿನಿಯಮ, (1927)ರ ಉಪ ಬಂಧಗಳ ಅಡಿಯಲ್ಲಿ ನಿರ್ವಹಿಸಲಾಗುತ್ತಿದೆ. ಆದರೆ ಕಾಯ್ದೆಯ ಸೆಕ್ಷನ್ 23 ರ ಅಡಿಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ:ಆರ್‌ಡಿ 77 ಎಂಇಟಿ/2003, ದಿನಾಂಕ:30.04.2003ರ ಅನ್ವಯ ಪ್ರಕಟಿಸಿರುವ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಈ ದೇವಾಲಯದ ಹೆಸರು ಕೈತಪ್ಪಿನಿಂದ ಬಿಟ್ಟು ಹೋಗಿದ್ದು, ಸದರಿ ದೇವಾಲಯವು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಸೆಕ್ಷನ್ 23 ಅನ್ವಯ ಅಧಿಸೂಚಿತ ಸಂಸ್ಥೆಯೆಂದು ಪ್ರಕಟಿಸುವಂತೆ ಕೋರಿರುತ್ತಾರೆ.

ಮೇಲೆ (1)ರಲ್ಲಿ ಓದಲಾದ ರಾಜ್ಯ ಧಾರ್ಮಿಕ ಪರಿಷತ್ತಿನ ದಿನಾಂಕ:26.09.2012ರ ಸಭೆಯಲ್ಲಿ ಮಂಡಿಸಲಾಗಿದ್ದು, ಶ್ರೀ ಆತ್ಮಾರಾಮಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲು ತೀರ್ಮಾನಿಸಲಾಗಿರುತ್ತದೆಂದೂ, ಆದ್ದರಿಂದ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ನರಸೀಪುರ ಗ್ರಾಮದ ಶ್ರೀ ಆತ್ಮಾರಾಮಸ್ವಾಮಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಸೆಕ್ಷನ್ 23(ಎ)ರ ಅನ್ವಯ ಅಧಿಸೂಚಿತ ಸಂಸ್ಥೆಯೆಂದು ಅಧಿಸೂಚನೆ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುವರು.

ಸದರಿ ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 89 ಮುಆಬಿ 2012; ಬೆಂಗಳೂರು, ದಿನಾಂಕ: 15ನೇ ಜನವರಿ. 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಸ್ತಾವನೆ ಪರಿಸೀಲಿಸಲಾಯಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿಯ ನರಸೀಪುರ ಗ್ರಾಮದ ಶ್ರೀ ಆತ್ಮಾರಾಮಸ್ವಾಮಿ ದೇವಾಲಯವನ್ನು ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಸೆಕ್ಷನ್ 23(ಎ)(ii)ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶ್ರೀನಿವಾಸ ದೀಕ್ಷಿತ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

PR.467
S/C.150

## ಕಂದಾಯ ಸಚಿವಾಲಯ

**ವಿಷಯ:–** ಬೆಳಗಾವಿ ಜಿಲ್ಲೆಯ ಅರಭಾವಿ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:–** ಸರ್ಕಾರದ ಆದೇಶ ಸಂಖ್ಯೆ: ಕಂಇ 67 ಮುಸರ 2009, ದಿನಾಂಕ:25–02–2009

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ಅರಭಾವಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಅರಭಾವಿ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಳಗಾವಿ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಅರಭಾವಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಅರಭಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 76 ಮುಸರ 2011; ಬೆಂಗಳೂರು, ದಿನಾಂಕ: 09ನೇ ಅಕ್ಟೋಬರ್, 2012**

ಬೆಳಗಾವಿ ಜಿಲ್ಲೆಯ ಅರಭಾವಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಪರಸಪ್ಪ ಲಕ್ಷ್ಮಣಬಬಲಿ, ನಾಗನೂರು ಗ್ರಾಮ, ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ | ಅಧ್ಯಕ್ಷರು |
| 2 | ಶ್ರೀ ಪ್ರಭು ದೇವಪ್ಪ ಲಗಳಿ, ರಡೇರಟ್ಟಿ ಗ್ರಾಮ, ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ | ಸಾಮಾನ್ಯ |
| 3 | ಶ್ರೀಮತಿ ರೇಣುಕಾ ಬಸವಂತ ಕೋಣಿ, ಬೆಟಗೇರಿ ಗ್ರಾಮ, ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ | ಮಹಿಳೆ |
| 4 | ಶ್ರೀ ಶಂಕರ ಧರ್ಮಣ್ಣ ಬೆಳಗಲಿ, ಯಾದವಾಡ ಗ್ರಾಮ, ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ | ಪರಿಶಿಷ್ಟ ಜಾತಿ |
| 5 | ಶ್ರೀ ಭೂತಪ್ಪ ತಮ್ಮಣ್ಣ ಗೋಡೇರ ಉದಗಟ್ಟಿ ಗ್ರಾಮ, ಗೋಕಾಕ ತಾಲ್ಲೂಕು, ಬೆಳಗಾವಿ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶ್ರೀನಿವಾಸ ದೀಕ್ಷಿತ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

PR.466
S/C.150

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಸಾಲಗೋನಹಳ್ಳಿ ಹತ್ತಿರ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ಮತ್ತು ಕೊಂಡಜ್ಜಿವಡೇರಹಳ್ಳಿಸ.ನಂ.11ರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್‌ಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ/03/ ನಯೋಕಾ/ 2011, ದಿ:13.02.2012.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂ.4/ಸ.ಇಂ.10/ ದಾವಣಗೆರೆ/ಹರಿಹರ–ಟೆಂಡರ್: 2012–13/454, ದಿನಾಂಕ: 30.01.2013.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಆರ್.ಐ.ಡಿ.ಎಫ್–17ರಡಿ ರೂ.3478.03ಲಕ್ಷ ಮೊತ್ತದ 111 ಕಾಮಗಾರಿಗಳ ಅಂದಾಜುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಕಾಮಗಾರಿಗಳ ಪೈಕಿ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಸಾಲಗೋನಹಳ್ಳಿ ಹತ್ತಿರ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ಮತ್ತು ಕೊಂಡಜ್ಜಿ ವಡೇರಹಳ್ಳಿ ಸ.ನಂ.11ರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಗಳು ಇರುತ್ತವೆ. ಅಂದಾಜು ಪಟ್ಟಿಗಳಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರು ಕೆಳಕಂಡಂತೆ ಮಂಜೂರಾತಿ ನೀಡಿರುತ್ತಾರೆ.

| | ಅಂದಾಜು ಮೊತ್ತ | ಸಿ.ಆರ್ ಸಂಖ್ಯೆ |
|---|---|---|
| (1) ಸಾಲಗೋನಹಳ್ಳಿ ಹತ್ತಿರ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ | ರೂ. 50.00 ಲಕ್ಷ | 56/12–13 |
| (2) ಕೊಂಡಜ್ಜಿ ವಡೇರಹಳ್ಳಿ ಸ.ನಂ.11ರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ | ರೂ. 40.00 ಲಕ್ಷ | 57/12–13 |
| **ಒಟ್ಟು** | **ರೂ. 90.00ಲಕ್ಷ** | |

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 03.11.2012 |
| ಕನ್ನಡ ಪ್ರಭ ಮತ್ತು ವಿಜಯ ಕರ್ನಾಟಕ | 05.11.2012 |

ತಾಂತ್ರಿಕ ಬಿಡ್ ಅನ್ನು ದಿನಾಂಕ 20.11.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತೆರೆದು ಪರಿಶೀಲಿಸಲಾಗಿರುತ್ತದೆ. ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಒಬ್ಬರ ಬಿಡ್ ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ 89,13,102/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ **ಶ್ರೀ/ಮೆಸರ್ಸ್** | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಹೆಚ್.ಕೃಷ್ಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 96,26,436/– | 8.00 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಹೆಚ್.ಕೃಷ್ಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ **8.00**ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ **ಶೇ.7.90%** ಹೆಚ್ಚಿನ ದರಗಳಿಗೆ ಅಂದರೆ ರೂ. **96,17,237/–** ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಅಪಿಬಂ 2013 (ತಾಂತ್ರಿಕ),ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಸಾಲಗೋನಹಳ್ಳಿ ಹತ್ತಿರ ಸೂಳೆಕೆರೆ ಹಳ್ಳಕ್ಕೆ ಅಡ್ಡಲಾಗಿ ಮತ್ತು ಕೊಂಡಜ್ಜಿ ವಡೇರಹಳ್ಳಿ ಸ.ನಂ.11ರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಮೊತ್ತ ರೂ. 89,13,102/–ಗಳ ಮೇಲೆ ಶೇ. 7.90ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 96,17,237/– ಗಳಿಗೆ (ರೂ ತೊಂಬತ್ತ ಆರು ಲಕ್ಷ ಹದಿನೇಳು ಸಾವಿರದ ಎರೆಡು ನೂರ ಮೂವತ್ತ ಏಳು ರೂಪಾಯಿಗಳು ಮಾತ್ರ) ಶ್ರೀ ಬಿ.ಹೆಚ್.ಕೃಷ್ಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

PR.357

## ತೋಟಗಾರಿಕೆ ಸಚಿವಾಲಯ

**ವಿಷಯ :** ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 2–8–1997
2. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 2–3–1998
3. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 3–3–1998
4. ಮಾನ್ಯ ವಿಶೇಷ ನ್ಯಾಯಾಧೀಶರ ನ್ಯಾಯಾಲಯ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇಲ್ಲಿನ ವಿಶೇಷ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ : 66/1999 ರಲ್ಲಿ ದಿನಾಂಕ: 21–7–2001 ರಂದು ನೀಡಿರುವ ಆದೇಶ.
5. ಕ್ರಿಮಿನಲ್ ಅಪೀಲ್ ಸಂಖ್ಯೆ: 1668/2001 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 24–7–2003 ರಂದು ನೀಡಿದ ಆದೇಶ
6. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 6–12–1999
7. ಲೋಕಾಯುಕ್ತ ಕಛೇರಿಯ ಪತ್ರ ಸಂಖ್ಯೆ : ಲೋಕ್ (ಎಆರ್‌ಇ–3)/ಇಎನ್‌ಕ್ಯೂ–23/2001–02, ದಿನಾಂಕ: 14–8–2002 ಮತ್ತು 2–9–2002.
8. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 3–6–2003
9. ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ : 6155/2003 ರ ದಿನಾಂಕ: 11–12–2009ರ ಆದೇಶ
10. ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 23–5–2011
11. ಸರ್ಕಾರದ ಪತ್ರ ಸಂಖ್ಯೆ : ವಾಕೈ 453 ರೇಸೇವಿ 2003, ದಿನಾಂಕ : 23–5–2011 ಮತ್ತು 4–6–2011
12. ಮಾನ್ಯ ಉಪ ಲೋಕಾಯುಕ್ತರ ಪತ್ರ ಸಂಖ್ಯೆ: ಲೋಕ್ (ಎಆರ್‌ಇ–3)ಇಎನ್‌ಕ್ಯೂ–23/2001–02, ದಿನಾಂಕ: 10–6–2011.
13. ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರಿಗೆ ಜಾರಿ ಮಾಡಲಾದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ : ವಾಕೈ 453 ರೇಸೇವಿ 2003, ದಿನಾಂಕ : 27–8–2011.
14. ಶ್ರೀಮತಿ ಎನ್.ಆರ್. ಜಯಂತಿ ರೇಷ್ಮೆ ಸಹಾಯಕ ನಿರ್ದೇಶಕರು ಇವರು ನೀಡಿದ ಸಮಜಾಯಿಷಿ ದಿನಾಂಕ: 7–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 2–8–1997ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಎನ್.ಆರ್. ಜಯಂತಿ ರೇಷ್ಮೆ ಸಹಾಯಕ ನಿರ್ದೇಶಕರು ಇವರು ಈ ಹಿಂದೆ ದೊಡ್ಡಬಳ್ಳಾಪುರದಲ್ಲಿ ರೇಷ್ಮೆ ಸಹಾಯಕ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾಗ ಹಿರಿಯ ರೇಷ್ಮೆ ನಿರೀಕ್ಷಕರಾಗಿ ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ದೊಡ್ಡಬಳ್ಳಾಪುರದಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಎ. ಹನುಮಂತಯ್ಯ ಇವರಿಗೆ ರಜೆ ಮಂಜೂರಾತಿ ಮಾಡುವ ಸಲುವಾಗಿ ರೂ. 1,000/– ಗಳ ಮೊತ್ತವನ್ನು ಲಂಚದ ರೂಪದಲ್ಲಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಬಲೆಗೆ ಬಿದ್ದುದ್ದರಿಂದ ಸದರಿಯವರ ವಿರುದ್ಧ ಲಂಚ ರೂಪದಲ್ಲಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಬಲೆಗೆ ಬಿದ್ದುದ್ದರಿಂದ ಸದರಿಯವರ ವಿರುದ್ಧ ಲಂಚ ನಿರ್ಮೂಲನಾ ಕಾಯ್ದೆ 1988ರಡಿ ಪ್ರಕರಣವನ್ನು ದಾಖಲು ಮಾಡಿ ಕರ್ನಾಟಕ ಲೋಕಾಯುಕ್ತ ಇವರು ಸಲ್ಲಿಸಿರುವ ವರದಿಯನ್ವಯ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1)(ಬಿ) ರ ಪ್ರಕಾರ ಸದರಿಯವರನ್ನು ಲೋಕಾಯುಕ್ತ ತನಿಖೆಯನ್ನು ಕಾಯ್ದಿರಿಸಿ, ಅಮಾನತ್ತಿನಲ್ಲಿಡಲಾಗಿದೆ.

(2) ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 2–3–1998 ರ ಆದೇಶದಲ್ಲಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರನ್ನು ಲೋಕಾಯುಕ್ತ ತನಿಖೆ ಬಾಕಿ ಇಟ್ಟು ಅಮಾನತ್ತನ್ನು ರದ್ದುಗೊಳಿಸಿ, ಸ್ಥಳ ನಿಯುಕ್ತಿಗೊಳಿಸಲಾಗಿದೆ.

(3) ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ : 3–3–1998ರ ಆದೇಶದಲ್ಲಿ ಲಂಚ ನಿರ್ಮೂಲನೆ ಕಾಯ್ದೆ 1988ರ ಕಲಂ 13(2) ರೊಂದಿಗೆ ಓದಿಕೊಂಡ ಕಲಂ 7 ಮತ್ತು ಕಲಂ 13(1)(ಡಿ) ಪ್ರಕಾರ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರ ವಿರುದ್ಧದ ಅಪರಾಧಗಳಿಗಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(4) ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಮಾನ್ಯ ವಿಶೇಷ ನ್ಯಾಯಾಧೀಶರ ನ್ಯಾಯಾಲಯ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇಲ್ಲಿನ ವಿಶೇಷ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ : 66/1999 ರಲ್ಲಿ ದಿನಾಂಕ : 21–7–2001ರಂದು ಈ ಕೆಳಕಂಡಂತೆ ಆದೇಶಿಸಿರುತ್ತದೆ.

> "ದಂ.ಪ್ರ.ಸಂಹಿತೆಯ ಕಲಂ 248(1) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರೋಪಿತರ ಮೇಲೆ ಯಾವುದೇ ಆರೋಪಣೆಯೂ ನಿಸ್ಸಂದೇಹವಾಗಿ ಸಿದ್ಧವಾಗಿಲ್ಲದಿರುವ ಕಾರಣ ಆರೋಪಿತರನ್ನು ಲಂಚ ನಿಷೇಧ ಕಾಯ್ದೆಯ ಕಲಂ 7 ಮತ್ತು 13 (1) (ಡಿ) ಅಡಿಯಲ್ಲಿ ದಂಡಿಸಲು ಸಾಧ್ಯವಿಲ್ಲದ ಕಾರಣ ಆರೋಪಿತರನ್ನು ದೋಷಮುಕ್ತಳೆಂದು ತೀರ್ಮಾನಿಸಿ ಬಿಡುಗಡೆ ಮಾಡಲಾಗಿದೆ."

(5) ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಎನ್.ಆರ್. ಜಯಂತಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ, ದಿನಾಂಕ : 21–7–2001 ರಂದು ಬೆಂಗಳೂರು ನಗರ ಸಿವಿಲ್ ಮತ್ತು ಗ್ರಾಮಾಂತರ ಜಿಲ್ಲೆಯ ವಿಶೇಷ ನ್ಯಾಯಾಲಯವು ಆರೋಪದಿಂದ ಮುಕ್ತಗೊಳಿಸಿದ ಆದೇಶದ ವಿರುದ್ಧ ಸಲ್ಲಿಸಲಾಗಿದ್ದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ : 1668/2001ನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 24–7–2003 ರ ಆದೇಶದಲ್ಲಿ ವಜಾಗೊಳಿಸಲಾಗಿದೆ.

(6) ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ದಿನಾಂಕ : 6–12–1999ರ ಆದೇಶದಲ್ಲಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರಡಿ ಮಾನ್ಯ ಉಪಲೋಕಾಯುಕ್ತರ ಮೂಲಕ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ.

(7) ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ : 14–8–2002 ಮತ್ತು 2–9–2002ರ ವರದಿಯನ್ನು ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರು ಶ್ರೀ ಎ. ಹನುಮಂತಯ್ಯ ಇವರನ್ನು ಒತ್ತಾಯಿಸಿ ರೂ. 2000/–ಗಳನ್ನು ಲಂಚವಾಗಿ ಪಡೆದಿರುವ ಗುರುತರ ಆರೋಪವು ಸಾಬೀತಾಗಿರುವುದರಿಂದ ಸದರಿಯವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ಮಾನ್ಯ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುತ್ತಾರೆ. ವಿಚಾರಣಾ ವರದಿ ಮತ್ತು ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಯನ್ನು ಸದರಿ ಅಧಿಕಾರಿಗಳಿಗೆ ನೀಡಿ, ನಿಯಮಾನುಸಾರ ಆಪಾದಿತ ಅಧಿಕಾರಿಯ ಲಿಖಿತ ಹೇಳಿಕೆಯನ್ನು ಪಡೆಯಲು ಎರಡನೇ ಕಾರಣ ಕೇಳುವ ನೋಟೀಸನ್ನು ದಿನಾಂಕ : 20–9–2002 ರಂದು ಜಾರಿ ಮಾಡಲಾಗಿತ್ತು ಆಪಾದಿತ ಅಧಿಕಾರಿಯು ದಿನಾಂಕ : 31–10–2002 ರಂದು ಎರಡನೇ ಕಾರಣ ಕೇಳುವ ನೋಟೀಸಿಗೆ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ತಮ್ಮ ಪ್ರಕರಣವನ್ನು ಲೋಕಾಯುಕ್ತ ಸಂಸ್ಥೆಯು ಸಲ್ಲಿಸಿರುವ ವಿಚಾರಣಾ ವರದಿ ಮತ್ತು ಶಿಫಾರಸ್ಸನ್ನು ಯಾವುದೇ ಆಧಾರವಿಲ್ಲದೆ ಮಾಡಿರುತ್ತಾರೆಂದು ತಿಳಿಸಿದ್ದರು. ಇದೇ ಆರೋಪಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ದಾಖಲಿಸಲಾಗಿದ್ದ ಕ್ರಿಮಿನಲ್ ಮೊಕದ್ದಮೆಯಲ್ಲಿ ತಮ್ಮನ್ನು ದೋಷಮುಕ್ತರನ್ನಾಗಿ ಮಾಡಿರುವುದರಿಂದ ಮತ್ತೊಮ್ಮೆ ಇದೇ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಿರುವುದು ಸರ್ವೋಚ್ಚ ನ್ಯಾಯಾಲಯವು "M. Paul Authony Vs. Bharati Gold Mines Ltd., reported in AIR 1999 SC page 1416" ಪ್ರಕರಣದಲ್ಲಿ ನೀಡಿರುವ ತೀರ್ಪಿಗೆ ವಿರುದ್ಧವಾಗಿರುವುದಾಗಿ ಸಮಜಾಯಿಷಿ ಸಲ್ಲಿಸಿರುತ್ತಾರೆ.

(8) ಶ್ರೀಮತಿ ಎನ್.ಆರ್. ಜಯಂತಿ ಇವರು ಸಲ್ಲಿಸಿರುವ ಸಮಜಾಯಿಷಿಗೆ ಈ ಕೆಳಕಂಡಂತೆ ಪ್ರತಿಕ್ರಿಯೆ ನೀಡಲಾಗಿದೆ.

ಈ ಪ್ರಕರಣಕ್ಕೆ ಎಂ.ಪಾಲ್ ಅಂಥೋಣಿ ಮತ್ತು ಭಾರತ್ ಗೋಲ್ಡ್ ಮೈನ್ಸ್ ನಿಯಮಿತದ ತೀರ್ಪು ಅನ್ವಯಿಸುವುದಿಲ್ಲವೆಂದು ಇದಕ್ಕೆ ವಿರುದ್ಧವಾಗಿ ಮೆಹಬೂಬ್ ಸಾಬ್ ಪ್ರಕರಣವು ಅನ್ವಯವಾಗುತ್ತಿತ್ತು. ಆ ಪ್ರಕಾರವಾಗಿ ಆರೋಪಿತರು ನ್ಯಾಯಾಲಯದಲ್ಲಿ ಆರೋಪಗಳಿಂದ ಗೌರವಾನ್ವಿತ ಖುಲಾಸೆ (Honourable Acquitter) ಪಡೆಯದಿದ್ದಲ್ಲಿ ; ಅದೇ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಆರೋಪಿತರ ವಿರುದ್ಧ ಸೂಕ್ತ ಕ್ರಮ ತೆಗೆದುಕೊಳ್ಳಲು ಯಾವುದೇ ಬಾಧಕವಿರುವುದಿಲ್ಲ. ಪ್ರಸ್ತುತ ಪ್ರಕರಣದಲ್ಲಿ ಶ್ರೀಮತಿ ಎನ್.ಆರ್. ಜಯಂತಿಯವರು ನ್ಯಾಯಾಲಯದಲ್ಲಿ ಗೌರವಾನ್ವಿತ ಖುಲಾಸೆ ಹೊಂದಿರುವುದಿಲ್ಲವಾದ್ದರಿಂದ ಹಾಗೂ ಈ ಪ್ರಕರಣಕ್ಕೆ ಮೆಹಬೂಬ್ ಸಾಬ್ ಪ್ರಕರಣವು ಅನ್ವಯವಾಗುವುದರಿಂದ ರಾಜ್ಯ ಸರ್ಕಾರವು ಇಲಾಖಾ ವಿಚಾರಣೆ ನಡೆಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ಪ್ರಕಾರ ಸೂಕ್ತ ಕ್ರಮ ತೆಗೆದುಕೊಳ್ಳಲು ಬಾಧಕವಿರುವುದಿಲ್ಲ.

(9) ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ದಿನಾಂಕ : 3–6–2003ರ ಆದೇಶದಲ್ಲಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು, ರೇಷ್ಮೆ ವಿನಿಯಮ ಕೇಂದ್ರ ಬೆಂಗಳೂರು ಇವರ ವಿರುದ್ಧ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ವಿಚಾರಣಾಧಿಕಾರಿಯವರ ವರದಿ ಹಾಗೂ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು, 1957ರ ನಿಯಮ 8 (vi) ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

(10) ಸರ್ಕಾರದ ಆದೇಶ ಸಂಖ್ಯೆ : ವಾಕೈ 226 ರೇಸೇವಿ 1997, ದಿನಾಂಕ : 3–6–2003 ನ್ನು ಪ್ರಶ್ನಿಸಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ : 6155/2003 ನ್ನು ಶ್ರೀಮತಿ ಎನ್.ಆರ್. ಜಯಂತಿ ಇವರು ದಾಖಲಿಸಿದ್ದು, ಸದರಿ ಪ್ರಕರಣವು ಅಂತಿಮ ವಿಚಾರಣೆಯಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (9) ರ ದಿನಾಂಕ : 11–12–2009 ರಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

> "In the light of the above mentioned principle we find that the inquiry from the stage the inquiry report was furnished by the Inquiring authority is void on the report has to be considered by the Upalokayukta. In that view of the matter, we allow the application and setting aside the order of the disciplinary authority bearing No. Va.Kye 226 Resevi 97, dated : 3-6-2003 (Annexure A12) we remand the matter to the Government with a direction to send the records to the Upalokayukta to consider the inquiry report and take further steps in the matter in accordance with law".

(11) ಮೇಲೆ ಓದಲಾದ ಕ್ರಮ ಸಂಖ್ಯೆ (10) ರ ದಿನಾಂಕ : 23–5–2011ರ ಆದೇಶದಲ್ಲಿ ಶ್ರೀ ಎನ್.ಆರ್. ಜಯಂತಿ, ಕಡ್ಡಾಯ ನಿವೃತ್ತಿಗೊಂಡ ರೇಷ್ಮೆ ಸಹಾಯಕ ನಿರ್ದೇಶಕರು ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಿಸಿದ್ದ ಅರ್ಜಿ ಸಂಖ್ಯೆ : 6155/2003 ರ ಪ್ರಕರಣದಲ್ಲಿ ಮಾನ್ಯ ನ್ಯಾಯಮಂಡಳಿಯು ದಿನಾಂಕ : 11–12–2009 ರಂದು ನೀಡಿರುವ ಆದೇಶದ ಪ್ರಕಾರ ಸದರಿಯವರ ಮೇಲಿನ ಆರೋಪಗಳ ಕುರಿತಾದ ಸಂಪೂರ್ಣ ದಾಖಲೆಗಳನ್ನು ಮಾನ್ಯ ಉಪ ಲೋಕಾಯುಕ್ತರಿಗೆ ಕಳುಹಿಸಿ, ಮಾನ್ಯ ಉಪ ಲೋಕಾಯುಕ್ತರು ಈ ವಿಷಯದಲ್ಲಿನ ದಾಖಲೆಗಳ ಪರಿಶೀಲನೆಯ ನಂತರ ಶಿಸ್ತು ಕ್ರಮಕ್ಕೆ ಶಿಫಾರಸ್ಸು/ವರದಿ ಮಾಡಿದಲ್ಲಿ, ಅವರ ಶಿಫಾರಸ್ಸು/ವರದಿಯನ್ನು ಆಧರಿಸಿ, ಅದರಂತೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂಬ ಷರತ್ತಿಗೊಳಪಟ್ಟು ಸದರಿಯವರನ್ನು ರೇಷ್ಮೆ ಇಲಾಖೆಯಲ್ಲಿ ರೇಷ್ಮೆ ಸಹಾಯಕ ನಿರ್ದೇಶಕರ ಹುದ್ದೆಯ ಸೇವೆಗೆ ಪುನರ್ ನೇಮಕ ಮಾಡಿ ಆದೇಶಿಸಲಾಗಿದೆ.

(12) ಮೇಲೆ ಓದಲಾದ ಕ್ರಮ ಸಂಖ್ಯೆ (11) ರ ದಿನಾಂಕ : 23–5–2011 ಮತ್ತು 4–6–2011ರ ಪತ್ರಗಳಲ್ಲಿ ಎಲ್ಲಾ ದಾಖಲೆಗಳನ್ನು ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರಿಗೆ ಹಿಂದಿರುಗಿಸುತ್ತಾ ಶ್ರೀಮತಿ ಎನ್.ಆರ್. ಜಯಂತಿಯವರ ಸೇವಾವಧಿ 2 ವರ್ಷದ ಒಳಗೆ ಇದ್ದು, ಇವರ ವಿರುದ್ಧ ತ್ವರಿತವಾಗಿ ಕ್ರಮ ಜರುಗಿಸಬೇಕಾಗಿರುವುದರಿಂದ, ಸದರಿ ತನಿಖಾ ಸಂಬಂಧ ಮೂಲ ದಾಖಲೆಗಳನ್ನು ಉಪ ಲೋಕಾಯುಕ್ತರಿಗೆ ಸಲ್ಲಿಸಿ, ಅವರಿಂದ ವಿಚಾರಣೆ ನಡೆಸಿ, ವರದಿಯನ್ನು ಸಲ್ಲಿಸುವಂತೆ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ಕೋರಲಾಗಿತ್ತು.

(13) ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ದಿನಾಂಕ : 10–6–2011 ರ ಪತ್ರದಲ್ಲಿ ಕರ್ನಾಟಕ ಉಪಲೋಕಾಯುಕ್ತರು ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ.

> Provisio to Rule 8(vi) to (viii) of KCS (CC&A) Rules, 1957, mandates imposition of one of the penalities provided under sub-rule (vi) to (viii) thereof for an established charge of corruption, unless there are special and adequate reasons to the contrary. In the instant case, I do no find any such reason. So, in the facts and circumstances, in my opinion, the penalty provided under Rule 8(vi) of said Rules, i.e., compulsory retirement of the DGO-Smt. N.R. Jayanthi from service would be an appropriate penalty-Accordingly, recommended for imposition of the said penalty on the DGO-Smt. N.R. Jayanthi.

(14) ಮೇಲೆ ಓದಲಾದ ಕ್ರಮ ಸಂಖ್ಯೆ (13)ರ ದಿನಾಂಕ : 27–8–2011ರ 2ನೇ ಕಾರಣ ಕೇಳುವ ನೋಟೀಸ್‌ನಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ರೀತ್ಯಾ ದಂಡನೆಯನ್ನು ವಿಧಿಸಿ, ಸರ್ಕಾರಿ ಸೇವೆಯಿಂದ ಕಡ್ಡಾಯವಾಗಿ ಏಕೆ ನಿವೃತ್ತಿಗೊಳಿಸಬಾರದು ಎಂಬ ಬಗ್ಗೆ ಸಮಜಾಯಿಷಿ ಏನಾದರೂ ಇದ್ದಲ್ಲಿ ನೋಟೀಸ್ ತಲುಪಿದ 15 ದಿನದೊಳಗಾಗಿ ಲಿಖಿತವಾಗಿ ನೀಡುವಂತೆ ಮತ್ತು ನಿಗಧಿತ ಅವಧಿಯಲ್ಲಿ ಸಮಜಾಯಿಷಿ ಸ್ವೀಕೃತವಾಗದಿದ್ದಲ್ಲಿ ಸಮಜಾಯಿಷಿ ಏನೂ ಇಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸುತ್ತಾ ನೋಟೀಸನ್ನು ಜಾರಿ ಮಾಡಲಾಗಿತ್ತು.

(15) ಮೇಲೆ ಓದಲಾದ ಕ್ರಮ ಸಂಖ್ಯೆ (14)ರ ದಿನಾಂಕ : 7–10–2011ರಲ್ಲಿ ಶ್ರೀಮತಿ ಎನ್.ಆರ್. ಜಯಂತಿರವರು ಈ ಕೆಳಕಂಡಂತೆ ವಿವರಣೆಯನ್ನು ನೀಡುತ್ತಾ ಆರೋಪವನ್ನು ನಿರಾಕರಿಸಿರುತ್ತಾರೆ.

(i) ವಿಚಾರಣಾ ವರದಿಯ ಪುಟ 15ರಲ್ಲಿ ಫಿರ್ಯಾದಿ ಶ್ರೀ ಎ. ಹನುಮಂತಯ್ಯ ಇವರ ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ರಜೆ ಅರ್ಜಿಯು ಆರೋಪಿತ ಅಧಿಕಾರಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರ ಬಳಿ ಬಾಕಿ ಇತ್ತೆಂದು ತಿಳಿಸಿರುವುದು ಸರಿಯಲ್ಲ. ಆರೋಪಿತ ಅಧಿಕಾರಿಗಳು ರಜೆ ಅರ್ಜಿಗೆ ಸಂಬಂಧಿಸಿದಂತೆ, ಲಿಖಿತ ವಿವರಣೆಯ ಕಂಡಿಕೆ 11ರಲ್ಲಿ ಫಿರ್ಯಾದಿ ಶ್ರೀ ಎ. ಹನುಮಂತಯ್ಯ ಇವರು ದಿನಾಂಕ : 24–5–1996 ರಿಂದ 6–10–1996 ರವರೆಗೆ ರಜೆ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸಿದ್ದು. ಈ ಅವಧಿಯ ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಶ್ರೀ ಎ. ಹನುಮಂತಯ್ಯ ಇವರ ವಿರುದ್ಧ ಶಿಸ್ತು ಪ್ರಾಧಿಕಾರವಾದ ಜಂಟಿ ನಿರ್ದೇಶಕರು, ದಿನಾಂಕ : 17–6–1997ರಂದು ಇಲಾಖಾ ವಿಚಾರಣೆಗೆ ಆದೇಶವನ್ನು ನೀಡಿರುತ್ತಾರೆ. ಮತ್ತು ಈ ವಿಷಯವು ಸದರಿ ಅವಧಿಯಲ್ಲಿ ಬಾಕಿ ಉಳಿದಿತ್ತು. ವಸ್ತು ಸ್ಥಿತಿ ಈ ರೀತಿ ಇರುವಾಗ ಶ್ರೀ ಎ. ಹನುಮಂತಯ್ಯ ಇವರಿಗೆ ರಜೆಯನ್ನು ಮಂಜೂರು ಮಾಡಬಹುದೆ ಎಂಬ ಬಗ್ಗೆ ಆರೋಪಿ ಅಧಿಕಾರಿಯಾದ ಶ್ರೀಮತಿ ಎನ್.ಆರ್. ಜಯಂತಿ ಇವರು ಮೇಲಾಧಿಕಾರಿಗಳ ಸ್ಪಷ್ಟೀಕರಣವನ್ನು ಕೋರಿರುತ್ತಾರೆ.

ಆರೋಪಿತ ಅಧಿಕಾರಿಯ ರಜೆಯ ಮಂಜೂರಾತಿಗಾಗಿ ಅಕ್ರಮ ಸಂಭಾವನೆಯನ್ನು ಕೋರಿದ್ದ ಬಗ್ಗೆ Exhibit ಪುಟ 11 ರಲ್ಲಿ ತನಿಖಾಧಿಕಾರಿಯವರು ದಾಖಲಿಸಿರುತ್ತಾರೆ. ಆರೋಪಿತ ಅಧಿಕಾರಿಗೆ ಆ ಹಂತದಲ್ಲಿ ಶ್ರೀ ಎ. ಹುನುಮಂತಯ್ಯ, ಇವರಿಗೆ ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ಅಧಿಕೃತ ಕೆಲಸವನ್ನು ಮಾಡಿಕೊಡಲು ಅಥವಾ ವೈದ್ಯಕೀಯ ಕಾರಣಗಳ ಆಧಾರದಲ್ಲಿ ರಜೆಯನ್ನು ಮಂಜೂರು ಮಾಡಲು ಅಧಿಕಾರ/ಆಸ್ಪದ ಇರಲಿಲ್ಲ. ಶ್ರೀ ಹನುಮಂತಯ್ಯ ಇವರು ಆರೋಪಿತ ಅಧಿಕಾರಿಯ ಮೇಲೆ ಲೋಕಾಯುಕ್ತ ಪೊಲೀಸರಿಗೆ ದಿನಾಂಕ : 7–7–1997ರಂದು ದೂರು ಸಲ್ಲಿಸಿರುತ್ತಾರೆ ಎಂಬುದು ಗಮನಾರ್ಹ ಅಂಶವಾಗಿದೆ. ವಿಚಾರಣಾ ಪ್ರಾಧಿಕಾರವು ವಿಚಾರಣಾ ಸಂದರ್ಭದಲ್ಲಿ ಈ ಅಂಶವನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯ ಮೇಲೆ ನೇರ ಹಾಗೂ ನಿರ್ದಿಷ್ಟ ಆರೋಪಗಳಿದ್ದ ಬಗ್ಗೆ ಸ್ಪಷ್ಟವಾಗುವುದಿಲ್ಲ.

(ii) ಫಿರ್ಯಾದುದಾರರಾದ ಶ್ರೀ ಎ. ಹನುಮಂತಯ್ಯ, ಇವರು ದಿನಾಂಕ : 19–6–1997ರಂದು ರೂ. 1,000/– ಅಕ್ರಮ ಸಂಭಾವನೆ ನೀಡಿದ ಬಗ್ಗೆ ವಿವಿಧ ಸಂದರ್ಭಗಳಲ್ಲಿ ಹೇಳಿಕೆಯನ್ನು ನೀಡಿದ್ದು. ಸದರಿ ಹೇಳಿಕೆಗಳು ನಂಬಿಕೆಗೆ ಅರ್ಹವಲ್ಲವೆಂದು ತಿಳಿಸಿರುತ್ತಾರೆ ಮತ್ತು ವಿಚಾರಣಾ ಪ್ರಾಧಿಕಾರವು ಈ ಅಂಶವನ್ನು ಕಡೆಗಣಿಸಿರುವುದಾಗಿ ಪ್ರತಿವಾದಿಸಿರುತ್ತಾರೆ.

(iii) ಅಕ್ರಮ ಸಂಭಾವನೆ ಪಡೆದ ಸಂದರ್ಭದಲ್ಲಿ ಆರೋಪಿತ ಅಧಿಕಾರಿಯು ಅಕ್ರಮ ಸಂಭಾವನೆಗಾಗಿ ಒತ್ತಾಯಿಸಿರಬೇಕು ಮತ್ತು ಪಡೆದಿರಬೇಕು. ಆದರೆ, ಆರೋಪಿತ ಅಧಿಕಾರಿಯು ದಿನಾಂಕ : 19–6–1997ರಂದು ಅಕ್ರಮ ಸಂಭಾವನೆಯನ್ನು ಪಡೆಯಲು ಒತ್ತಾಯಿಸಿರುವ ಬಗ್ಗೆ ಮತ್ತು ಪಡೆದಿರುವ ಬಗ್ಗೆ ಫಿರ್ಯಾದುದಾರರಾದ ಶ್ರೀ ಎ. ಹನುಮಂತಯ್ಯ, ಇವರನ್ನು ಹೊರತುಪಡಿಸಿ ಆರೋಪವನ್ನು ಸಾಬೀತುಪಡಿಸಲು/ ಸಮರ್ಥಿಸಲು ಶಿಸ್ತು ಪ್ರಾಧಿಕಾರದ ಪರವಾಗಿ ಹಾಜರುಪಡಿಸಿದ ಸಾಕ್ಷಿಗಳಾದ PW–3 ಮತ್ತು PW–4 ಗಳು ಘಟನೆಯು ನಡೆದ ದಿನಾಂಕದಂದು ಕಛೇರಿಯ ಹೊರಗೆ ನಿಂತಿದ್ದು, ಆ ದಿನಾಂಕದಂದು ಕಛೇರಿಯ ಒಳಗೆ ನಡೆದುದು ಏನು ಎಂಬ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ. ಆರೋಪಿತ ಅಧಿಕಾರಿಯ ಪರವಾಗಿ ಹಾಜರುಪಡಿಸಿದ ಶ್ರೀ ಸಿದ್ದಪ್ಪ ಇವರು ಗ್ರೂಪ್–ಡಿ ನೌಕರರಾಗಿದ್ದು, ಆರೋಪಿತ ಅಧಿಕಾರಿ ಬಾಗಿಲು ಮುಂದೆ ನಿಂತಿದ್ದು ಏನು ಸಂಭವಿಸಿತು ಎಂಬ ಬಗ್ಗೆ ಸಾಕ್ಷ್ಯವನ್ನು ನುಡಿದಿರುತ್ತಾರೆ. ಆದರೆ ವಿಚಾರಣಾ ಪ್ರಾಧಿಕಾರವು ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳದೆ ತಳ್ಳಿಹಾಕಿರುತ್ತದೆ.

(iv) ಅಕ್ರಮ ಸಂಭಾವನೆಯ ಪ್ರಕರಣಕ್ಕೆ ಸಂಬಂಧಿಸಿದಂತೆ ಫಿರ್ಯಾದಿಯ ಪರವಾದ ಸಾಕ್ಷಿಗಳಲ್ಲದೆ ಇನ್ನಿತರೆ ಸ್ವತಂತ್ರ ವ್ಯಕ್ತಿಗಳ ಸಾಕ್ಷಿಯೂ ಸಹ ಬಹುಮುಖ್ಯವಾಗುತ್ತದೆ. ಆದರೆ ವಿಚಾರಣಾ ಪ್ರಾಧಿಕಾರವು ಇದನ್ನು ಪರಿಗಣಿಸಿರುವುದಿಲ್ಲ.

(v) ವಿಚಾರಣೆಯ ಸಂದರ್ಭಗಳಲ್ಲಿ ಆರೋಪಿತ ಅಧಿಕಾರಿಯ ಮೇಲಿನ ಆರೋಪವನ್ನು ಸಾಬೀತುಪಡಿಸುವ ಹೊಣೆಗಾರಿಕೆ ವಿಚಾರಣಾಧಿಕಾರಿಯವರಿಗೆ ಸೇರಿದ್ದು. ಘಟನೆಯನ್ನು ಎಲ್ಲಾ ಕೋನಗಳಿಂದಲೂ ವಿಶ್ಲೇಷಿಸಿ ಸಮಗ್ರವಾಗಿ ಆರೋಪಗಳನ್ನು ಸಾಬೀತುಪಡಿಸಬೇಕಾಗುತ್ತದೆ. ಆದರೆ, ಈ ಪ್ರಕರಣದಲ್ಲಿ ಇದು ಸಂಭವಿಸಿರುವುದಿಲ್ಲ.

(vi) ಶಿಸ್ತು ಪ್ರಾಧಿಕಾರದ ಪರವಾಗಿ ಇಲಾಖಾ ವಿಚಾರಣೆಯಲ್ಲಿ ಸಾಕ್ಷಿಯನ್ನು ನುಡಿದ PW–2 ಆರೋಪಿತ ಅಧಿಕಾರಿಯ ಕೊಠಡಿಯಿಂದ 5 ರಿಂದ 6 ಅಡಿ ಹೊರಗಡೆ ನಿಂತಿದ್ದು, ಆರೋಪಿತ ಅಧಿಕಾರಿ ಮತ್ತು ಫಿರ್ಯಾದುದಾರರ ನಡುವೆ ಆ ದಿನಾಂಕದಂದು ಅಂದರೆ 19–6–1997 ರಂದು ಏನು ಸಂಭಾಷಣೆ ನಡೆಯಿತು ಎಂಬುದಾಗಿ ತಿಳಿಸಿರುವುದಿಲ್ಲ. ವಿಚಾರಣಾ ಪ್ರಾಧಿಕಾರವು PW–2 ರವರು ಆರೋಪಿತ ಅಧಿಕಾರಿಗೆ ಸಹಾಯ ಮಾಡುವ ಉದ್ದೇಶದಿಂದ ಪ್ರತಿಕೂಲ ಸಾಕ್ಷಿಯಾಗಿದ್ದರೆಂಬ ನಿರ್ಧಾರಕ್ಕೆ ಬಂದಿರುವುದು ಸಮಂಜಸವಲ್ಲ.

(vii) ಶಿಸ್ತು ಪ್ರಾಧಿಕಾರದ ಪರವಾಗಿ ಹಾಜರುಪಡಿಸಿದ PW–3 ಮತ್ತು PW–4 ಘಟನೆ ನಡೆದ ದಿನಾಂಕದ 19–6–1997ರಂದು ಘಟನೆ ಸ್ಥಳದಿಂದ ಸುಮಾರು 100 ಅಡಿ ಹೊರಗೆ ನಿಂತಿದ್ದು, ಸಂಭವಿಸಿದ ಘಟನೆ ಏನು ಎಂಬ ಬಗ್ಗೆ ಸ್ಪಷ್ಟವಾಗಿ ಸಾಕ್ಷಿ ನುಡಿದಿರುವುದಿಲ್ಲ. ಆದಾಗ್ಯೂ ವಿಚಾರಣಾ ಪ್ರಾಧಿಕಾರವು PW–1 ನೀಡಿರುವ ಸಾಕ್ಷಿಯು PW–3 ಮತ್ತು PW–4 ನೀಡಿರುವ ಸಾಕ್ಷ್ಯಕ್ಕೆ ಪೂರಕವಾಗಿದೆ ಎಂಬ ನಿರ್ಣಯಕ್ಕೆ ಬಂದಿರುವುದು ಸಮಂಜಸವಲ್ಲ. ಆದುದರಿಂದ ವಿಚಾರಣಾ ಪ್ರಾಧಿಕಾರದ ವರದಿಯನ್ನು ಒಪ್ಪಲು ಸಾಧ್ಯವಿರುವುದಿಲ್ಲ.

ಆರೋಪಿತ ಅಧಿಕಾರಿಯ ಮೇಲೆ ಲೋಕಾಯುಕ್ತ ಪೊಲೀಸರು Spl. C.C.No. 66/1999 ನ್ನು ದಾಖಲಿಸಿದ್ದು, ದಿನಾಂಕ : 21–7–2001ರ ತೀರ್ಪಿನಲ್ಲಿ ಆರೋಪಿತ ಅಧಿಕಾರಿಯು ತಮ್ಮ ವಿರುದ್ಧದ ಆರೋಪಗಳಿಂದ ಮುಕ್ತವಾಗಿರುತ್ತಾರೆ. ಸದರಿ ತೀರ್ಪಿನ ವಿರುದ್ಧ ಲೋಕಾಯುಕ್ತ ಪೊಲೀಸರು ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 1668/2001 ಅನ್ನು ದಾಖಲಿಸಿದ್ದು. ಮಾನ್ಯ ನ್ಯಾಯಾಲಯವು ದಿನಾಂಕ: 24–7–2003ರಂದು ನೀಡಿರುವ ಆದೇಶದಲ್ಲಿ ವಿಶೇಷ ನ್ಯಾಯಾಧೀಶರು, ನಗರ ಮತ್ತು ಗ್ರಾಮಾಂತರ ಜಿಲ್ಲೆಗಳು, ಬೆಂಗಳೂರು ಇವರ ಆದೇಶವನ್ನು ಎತ್ತಿ ಹಿಡಿದಿರುತ್ತದೆ.

ಕ್ರಿಮಿನಲ್ ಅಪೀಲು ಸಂಖ್ಯೆ : 1668/2001 ರ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 24–7–2003 ರಂದು ನೀಡಿರುವ ಆದೇಶದ ಕಂಡಿಕೆ 12 ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯಪಟ್ಟಿರುತ್ತದೆ :–

(12) On a perusal of Ex. PII, it shows that the Joint Director of Sericulture as well as the Disciplinary Authority ordered for initiation of the enquiry proceedings. The said order is dated 17-6-1997 under which, Sri K.C. Nagaraj, Assistant Director of Sericulture, Government Cocoon Market, Vijayapur was appointed as an enquiry officer to hold an enquiry in respect of the charges levelled against the complainant A. Hanumanthaiah. In the present case, the complaint is dated 7-7-1997. Therefore, it makes clear that after the orders were passed by the Competent Authority for initiation of the disciplinary proceedings against the complainant –A Hanumanthaiah on 17-6-1997, a complaint came to be filed as per Ex.P1 against the accused on 7-7-1997. This itself shows that the complainant had a plan to trap the accused Smt. N.R. Jayanthi, though there was noting on her table to do an official favour or for sanction of leave on medical grounds. It is therefore the learned Special Judge has rightly held that the prosecution has failed to prove the ingredients of Sections 7 and 13(1) (d) of the Prevention of Corruption Act.

ಆಂಧ್ರ ಪ್ರದೇಶ ರಾಜ್ಯದ ಉಚ್ಚನ್ಯಾಯಾಲಯವು 2007 (8) SLR 556 (Managing Director, State Bank of Hyderabad and another v/s P. Kata Rao) ಮತ್ತು ಸರ್ವೋಚ್ಚ ನ್ಯಾಯಾಲಯವು (1997) 2 SCC 699 ರ (Depot Manager, A.P.S.R.T.C. v/s Mohd. Yousuf Miya) ಹಾಗೂ ಸರ್ವೋಚ್ಚ ನ್ಯಾಯಾಲಯದ 1999 3 CC 679 (Captain M Paul Anthony v/s Bharat Gold Mines Ltd.,) ಪ್ರಕರಣಗಳ ಬಗ್ಗೆ ಪ್ರಸ್ತಾಪಿಸಿದ್ದು, ಈ ಪ್ರಕರಣಗಳಲ್ಲಿ ಇಲಾಖಾ ವಿಚಾರಣೆ/ಕ್ರಿಮಿನಲ್ ಪ್ರಕರಣಗಳು ಸಾಕ್ಷ್ಯ ದಾಖಲೆ ಒಂದೇ ರೀತಿ ಆಗಿದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗುವುದು ಎಂದು ತಿಳಿಸಲಾಗಿರುತ್ತದೆ. ಈ ತೀರ್ಪುಗಳನ್ವಯ ಶ್ರೀಮತಿ ಎನ್.ಆರ್. ಜಯಂತಿ ಇವರ ವಿರುದ್ಧ ಲೋಕಾಯುಕ್ತ ಪೊಲೀಸರು ವಿಶೇಷ ನ್ಯಾಯಾಲಯದಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಸದರಿ ಪ್ರಕರಣದಲ್ಲಿ ಆರೋಪಿಯು ತಮ್ಮ ವಿರುದ್ಧದ ಆರೋಪಗಳಿಂದ ಮುಕ್ತರಾಗಿರುತ್ತಾರೆ. ಮತ್ತು ಉಚ್ಚ ನ್ಯಾಯಾಲಯವು ಕೆಳಗಿನ ನ್ಯಾಯಾಲಯದ ಆದೇಶವನ್ನು ಗಣನೆಗೆ ತೆಗೆದುಕೊಂಡಿರುತ್ತದೆ.

ಆರೋಪಿತ ಅಧಿಕಾರಿಯಾದ ಶ್ರೀಮತಿ ಎನ್.ಆರ್. ಜಯಂತಿ ಇವರ ವಿರುದ್ಧದ ಪ್ರಕರಣದಲ್ಲಿ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸಿನ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 14 A (2) (e) ರ ಪ್ರಕಾರ ಸರ್ಕಾರವು ಸದರಿ ಆರೋಪಿತ ಅಧಿಕಾರಿಯ ವಿರುದ್ಧ ಯಾವ ದಂಡನೆಯನ್ನು ವಿಧಿಸಬಹುದು ಎಂಬ ಬಗ್ಗೆ ನಿರ್ಧರಿಸಬಹುದಾಗಿದೆ. ಸದರಿ ನಿಯಮವನ್ನು ಈ ಕೆಳಗೆ ಪುನರುಚ್ಚರಿಸಿದೆ :–

"14.A Procedure in cases entrusted to the Lokayukta :

(2) (e) On receipt of the record under clause (d) the Government shall take action in accordance with the provisions of Rule 11 A and in all such cases the Government shall be the Disciplinary Authority competent to impose any of the penalties specified in the rule 8".

(16) ಮಾನ್ಯ ವಿಶೇಷ ನ್ಯಾಯಾಲಯ, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇಲ್ಲಿನ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: Spl, C.C.No. 66/1999 ರ ಪ್ರಕರಣದಲ್ಲಿ ಭಾರತೀಯ ದಂಡ ಪ್ರಕ್ರಿಯೆ ಸಂಹಿತೆ ಕಲಂ 248(1)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರೋಪಿತಳ ಮೇಲೆ ಯಾವುದೇ ಆರೋಪಣೆಯೂ ನಿಸ್ಸಂದೇಹವಾಗಿ ಸಿದ್ದವಾಗಿಲ್ಲದಿರುವ ಕಾರಣ ಆರೋಪಿತಳನ್ನು ಲಂಚ ನಿಷೇಧ ಕಾಯ್ದೆಯ ಕಲಂ 7 ಮತ್ತು 13(1)(ಡಿ)ರ ಅಡಿಯಲ್ಲಿ ದಂಡಿಸಲು ಸಾಧ್ಯವಿಲ್ಲದ ಆರೋಪಿತರಾದ ಶ್ರೀಮತಿ ಎನ್. ಆರ್. ಜಯಂತಿಯವರನ್ನು ದೋಷಮುಕ್ತರೆಂದು ತೀರ್ಮಾನಿಸಿದ್ದು. ತದನಂತರ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ : 1668/2001 ನ್ನು ದಾಖಲಿಸಿದ್ದು, ಸದರಿ ಪ್ರಕರಣದಲ್ಲಿ ಮಾನ್ಯ ವಿಶೇಷ ನ್ಯಾಯಾಧೀಶರು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇವರ ಆದೇಶವನ್ನು ಎತ್ತಿ ಹಿಡಿಯುತ್ತಾ, ಕ್ರಿಮಿನಲ್ ಅಪೀಲ್‌ನ್ನು ವಜಾಗೊಳಿಸಿ ದಿನಾಂಕ : 24–7–2003 ರಂದು ತೀರ್ಪು ನೀಡಿರುವ ಮೇರೆಗೆ ಮತ್ತು ಮಾನ್ಯ ಉಪ ಲೋಕಾಯುಕ್ತರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿಯೂ ಗಂಭೀರ ಸ್ವರೂಪದ ಲೋಪದೋಷಗಳು ಇರುವುದಾಗಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರು ನೀಡಿರುವ ಸಮಜಾಯಿಷಿಯಲ್ಲಿ ಉಲ್ಲೇಖಿಸಿರುವುದರಿಂದ, ಈ ಎಲ್ಲಾ ಅಂಶಗಳನ್ನು ಪರಿಗಣಿಸಿ, ಮಾನ್ಯ ಉಪ ಲೋಕಾಯುಕ್ತರ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿರುವ ದಂಡನೆಯು ಅತಿ ಕಠಿಣವಾದ ದಂಡನೆ ಎಂದು ಭಾವಿಸಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ 1ನೇ ಷೆಡ್ಯೂಲ್ ಐಟಂ 33 ರ ಪ್ರಕಾರ ಪರಿಶೀಲಿಸಿ, ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿರುವ ಮೇರೆಗೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ತೋಇ 292 ರೇಸೇವಿ 2012, ಬೆಂಗಳೂರು, ದಿನಾಂಕ : 23–1–2013.**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಮಾನ್ಯ ವಿಶೇಷ ನ್ಯಾಯಾಲಯ, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇಲ್ಲಿನ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ : Spl.C.C.No. 66/1999ರ ಪ್ರಕರಣದಲ್ಲಿ ಭಾರತೀಯ ದಂಡ ಪ್ರಕ್ರಿಯೆ ಸಂಹಿತೆ ಕಲಂ 248 (1)ರ ಅಡಿಯಲ್ಲಿ ದತ್ತವಾಗಿರುವ

ಅಧಿಕಾರವನ್ನು ಚಲಾಯಿಸಿ ಆರೋಪಿತಳ ಮೇಲೆ ಯಾವುದೇ ಆರೋಪಣೆಯೂ ನಿಸ್ಸಂದೇಹವಾಗಿ ಸಿದ್ದವಾಗಿಲ್ಲದಿರುವ ಕಾರಣ ಆರೋಪಿತಳನ್ನು ಲಂಚ ನಿಷೇಧ ಕಾಯ್ದೆಯ ಕಲಂ 7 ಮತ್ತು 13(1)(ಡಿ)ರ ಅಡಿಯಲ್ಲಿ ದಂಡಿಸಲು ಸಾಧ್ಯವಿಲ್ಲದ ಕಾರಣ ಆರೋಪಿತರಾದ ಶ್ರೀಮತಿ ಎನ್.ಆರ್. ಜಯಂತಿಯವರನ್ನು ದೋಷಮುಕ್ತರೆಂದು ತೀರ್ಮಾನಿಸಿದ್ದು. ತದನಂತರ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲದಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ 1668/2001 ನ್ನು ದಾಖಲಿಸಿದ್ದು. ಸದರಿ ಪ್ರಕರಣದಲ್ಲಿ ಮಾನ್ಯ ವಿಶೇಷ ನ್ಯಾಯಾಧೀಶರು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ ಇವರ ಆದೇಶವನ್ನು ಎತ್ತಿ ಹಿಡಿಯುತ್ತಾ ಕ್ರಿಮಿನಲ್ ಅಪೀಲ್‌ನ್ನು ವಜಾಗೊಳಿಸಿ ದಿನಾಂಕ : 24–7–2003 ರಂದು ತೀರ್ಪು ನೀಡಿರುವ ಮೇರೆಗೆ ಮತ್ತು ಮಾನ್ಯ ಉಪ ಲೋಕಾಯುಕ್ತರು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿಯೂ ಗಂಭೀರ ಸ್ವರೂಪದ ಲೋಪದೋಷಗಳು ಇರುವುದಾಗಿ ಶ್ರೀಮತಿ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರು ನೀಡಿರುವ ಸಮಜಾಯಿಷಿಯಲ್ಲಿ ಉಲ್ಲೇಖಿಸಿರುವುದರಿಂದ, ಈ ಎಲ್ಲಾ ಅಂಶಗಳನ್ನು ಪರಿಗಣಿಸಿ, ಮಾನ್ಯ ಉಪ ಲೋಕಾಯುಕ್ತರ ವರದಿಯಲ್ಲಿ ಶಿಫಾರಸ್ಸು ಮಾಡಲಾಗಿರುವ ದಂಡನೆಯು ಅತಿ ಕಠಿಣವಾದ ದಂಡನೆ ಎಂದು ಭಾವಿಸಿ, ಶ್ರೀ ಎನ್.ಆರ್. ಜಯಂತಿ, ರೇಷ್ಮೆ ಸಹಾಯಕ ನಿರ್ದೇಶಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (iii)ರ ಪ್ರಕಾರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ. ವಿಜಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ (ರೇಷ್ಮೆ),

**P.R. 188**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಹೊಸದಾಗಿ ಸೃಜಿಸಲಾಗಿರುವ 69 ತಾಲ್ಲೂಕು ಯೋಜನಾ ಘಟಕಗಳಲ್ಲಿ 13 ತಾಲ್ಲೂಕು ಯೋಜನಾ ಅಧಿಕಾರಿಗಳ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಪಿಡಿ 102 ಎಸ್‌ಎಂಸಿ 2007, ದಿನಾಂಕ : 11–6–2007
2. ಸರ್ಕಾರದ ಆದೇಶ ಸಂಖ್ಯೆ : ಪಿಡಿ 14 ಎಸ್‌ಎಂಸಿ 2010, ದಿನಾಂಕ : 5–3–2010
3. ಸರ್ಕಾರದ ಆದೇಶ ಸಂಖ್ಯೆ : ಪಿಡಿ 15 ಎಸ್‌ಎಂಸಿ 2010, ದಿನಾಂಕ : 22–11–2010
4. ಸರ್ಕಾರದ ಆದೇಶ ಸಂಖ್ಯೆ : ಪಿಡಿ 230 ಎಸ್‌ಎಂಸಿ 2010, ದಿನಾಂಕ : 18–2–2013.

**ಪ್ರಸ್ತಾವನೆ :**

ಡಾ॥ ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿನ ಉನ್ನತಾಧಿಕಾರದ ಪ್ರಾದೇಶಿಕ ಅಸಮತೋಲನ ನಿವಾರಣಾ ಸಮಿತಿಯ ಶಿಫಾರಸ್ಸಿನಂತೆ ಗುರುತಿಸಲಾಗಿರುವ 114 ತಾಲ್ಲೂಕುಗಳ ಪೈಕಿ 39 ಅತೀ ಹಿಂದುಳಿದ ತಾಲ್ಲೂಕುಗಳು, 40 ಅತ್ಯಂತ ಹಿಂದುಳಿದ ತಾಲ್ಲೂಕುಗಳು ಮತ್ತು 35 ಹಿಂದುಳಿದ ತಾಲ್ಲೂಕುಗಳು ಇರುತ್ತದೆ. ಈ ಪೈಕಿ ಮೊದಲನೇ ಹಂತವಾಗಿ ರಾಜ್ಯದ 26 ಜಿಲ್ಲೆಗಳಲ್ಲಿನ 64 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಲು, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1197 ವೆಚ್ಚ–7/06, ದಿನಾಂಕ : 17–2–2007ರ ಸಹಮತಿಯನ್ವಯ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶವನ್ನು ಹೊರಡಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ವೇತನ ಶ್ರೇಣಿ ರೂ. 10000–18150 ಹೊಂದಿದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸಮೂಹ 'ಸಿ'ವೃಂದದ 43 ಸಹಾಯಕ ಸಾಂಖ್ಯಿಕ ಅಧಿಕಾರಿಗಳ ಹುದ್ದೆಗಳನ್ನು ಸದರಿ ನಿರ್ದೇಶನಾಲಯದ ವೃಂದ ಬಲದಲ್ಲಿಯೇ ಗುರುತಿಸಿ ಅವುಗಳನ್ನು ಸಮೂಹ 'ಬಿ' ವೃಂದದ ವೇತನ ಶ್ರೇಣಿ ರೂ. 11400–21600ರ ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿ ಆದೇಶಿಸಲಾಗಿದೆ.

ಮೇಲಿನ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದಲ್ಲಿ ಎರಡನೇ ಹಂತವಾಗಿ 43 ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಿ ಹಾಗೂ ಸದರಿ 43 ತಾಲ್ಲೂಕು ಯೋಜನಾ ಘಟಕಗಳಿಗೆ ತಾಲ್ಲೂಕು ಯೋಜನಾಧಿಕಾರಿಗಳನ್ನು ನೇಮಿಸುವ ಸಲುವಾಗಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ 43 ಸಹಾಯಕ ನಿರ್ದೇಶಕರ ಹುದ್ದೆಗಳನ್ನು ರಾಜ್ಯ ವಲಯದಿಂದ ಜಿಲ್ಲಾ ಪಂಚಾಯತ್ ವಲಯಕ್ಕೆ ವರ್ಗಾಯಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ : (4) ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದಲ್ಲಿ ಮೂರನೇ ಹಂತವಾಗಿ 69 ತಾಲ್ಲೂಕು ಯೋಜನಾ ಘಟಕಗಳನ್ನು ಪ್ರಾರಂಭಿಸಲು ಆದೇಶಿಸಲಾಗಿದ್ದು, ಸದರಿ 69 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಲು ಆರ್ಥಿಕ ಇಲಾಖೆಯ ಸಹಮತಿ ನೀಡಿದ ಸಂದರ್ಭದಲ್ಲಿ, 13 ಸಹಾಯಕ ನಿರ್ದೇಶಕರ ಸಮನಾಂತರ ಹುದ್ದೆಗಳಾದ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಅನುಮತಿ ನೀಡಿರುತ್ತದೆ. ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಪಿಡಿ 230 ಎಸ್‌ಎಂಸಿ 2010, ಬೆಂಗಳೂರು, ದಿನಾಂಕ : 18–2–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹೊಸದಾಗಿ ಸೃಜಿಸಲಾದ 69 ತಾಲ್ಲೂಕು ಯೋಜನಾ ಘಟಕಗಳಲ್ಲಿ (ಅನುಬಂಧ–I) ರಲ್ಲಿರುವಂತೆ 13 ತಾಲ್ಲೂಕು ಯೋಜನಾ ಘಟಕಗಳಿಗೆ ಸಹಾಯಕ ನಿರ್ದೇಶಕರ ಹುದ್ದೆಯ ಸಮನಾಂತರ ಹುದ್ದೆಯಾದ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗಳನ್ನು (ಪ್ರಸ್ತುತ ವೇತನ ಶ್ರೇಣಿ ರೂ. 22800–43200/–) ಸೃಜಿಸಿ ಆದೇಶಿಸಿದೆ.

ಸದರಿ ತಾಲ್ಲೂಕು ಯೋಜನಾಧಿಕಾರಿಗೆ ಹುದ್ದೆಗೆ ಅಗತ್ಯವಿರುವ ವೇತನ ಮತ್ತು ಇತರೆ ಭತ್ಯೆಗಳಿಗಾಗಿ ಅನುದಾನವನ್ನು ಆಯಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳು ಲೆಕ್ಕ ಶೀರ್ಷಿಕೆ 3451–00–101–0–26 NP ರಡಿ ಭರಿಸತಕ್ಕದೆಂದು ಸೂಚಿಸಿದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿರುವಂತೆ ತಾಲ್ಲೂಕು ಯೋಜನಾಧಿಕಾರಿಗಳು ತಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸತಕ್ಕದ್ದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 98 ವೆಚ್ಚ–6 2012, ದಿನಾಂಕ : 30–10–2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜ್ಯೋತಿ ಆರ್.ಜೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್–5).

**ಸರ್ಕಾರದ ಆದೇಶ ಸಂಖ್ಯೆ : ಪಿಡಿ 230 ಎಸ್‌ಎಂಪಿ 2010, ಬೆಂಗಳೂರು, ದಿನಾಂಕ : 18–2–2013 ರ (ಅನುಬಂಧ–1)**

**ರಾಜ್ಯದಲ್ಲಿ ಮೂರನೇ ಹಾಗೂ ಅಂತಿಮ ಹಂತವಾಗಿ ಸೃಜಿಸಲಾದ 69 ತಾಲ್ಲೂಕು ಯೋಜನಾ ಘಟಕಗಳಲ್ಲಿ 13 ತಾಲ್ಲೂಕು ಯೋಜನಾ ಘಟಕಗಳಿಗೆ ಸೃಜಿಸಲಾದ ಸಹಾಯಕ ನಿರ್ದೇಶಕರ ಸಮನಾಂತರ ಹುದ್ದೆಗಳಾದ ತಾಲ್ಲೂಕು ಯೋಜನಾಧಿಕಾರಿ ಹುದ್ದೆಗಳು.**

| ಕ್ರ. ಸಂ. | ಜಿಲ್ಲೆ | ಹುದ್ದೆ ಮತ್ತು ತಾಲ್ಲೂಕು |
|---|---|---|
| 1. | ಬೆಂಗಳೂರು (ಗ್ರಾ) | ತಾಲ್ಲೂಕು ಯೋಜನಾ ಅಧಿಕಾರಿ, ದೇವನಹಳ್ಳಿ |
| 2. | ಬೆಂಗಳೂರು (ಗ್ರಾ) | ತಾಲ್ಲೂಕು ಯೋಜನಾ ಅಧಿಕಾರಿ, ದೊಡ್ಡಬಳ್ಳಾಪುರ |
| 3. | ಬೆಂಗಳೂರು (ಗ್ರಾ) | ತಾಲ್ಲೂಕು ಯೋಜನಾ ಅಧಿಕಾರಿ, ನೆಲಮಂಗಲ |
| 4. | ಬೆಂಗಳೂರು ನಗರ | ತಾಲ್ಲೂಕು ಯೋಜನಾ ಅಧಿಕಾರಿ, ಬೆಂಗಳೂರು ಉತ್ತರ |
| 5. | ಬೆಂಗಳೂರು ನಗರ | ತಾಲ್ಲೂಕು ಯೋಜನಾ ಅಧಿಕಾರಿ, ಬೆಂಗಳೂರು ದಕ್ಷಿಣ |
| 6. | ಬೆಂಗಳೂರು ನಗರ | ತಾಲ್ಲೂಕು ಯೋಜನಾ ಅಧಿಕಾರಿ, ಬೆಂಗಳೂರು ಪೂರ್ವ |
| 7. | ಚಿಕ್ಕಬಳ್ಳಾಪುರ | ತಾಲ್ಲೂಕು ಯೋಜನಾ ಅಧಿಕಾರಿ, ಚಿಕ್ಕಬಳ್ಳಾಪುರ |
| 8. | ಕೋಲಾರ | ತಾಲ್ಲೂಕು ಯೋಜನಾ ಅಧಿಕಾರಿ, ಕೋಲಾರ |
| 9. | ರಾಮನಗರ | ತಾಲ್ಲೂಕು ಯೋಜನಾ ಅಧಿಕಾರಿ, ರಾಮನಗರ |
| 10. | ಮಂಡ್ಯ | ತಾಲ್ಲೂಕು ಯೋಜನಾ ಅಧಿಕಾರಿ, ಮಂಡ್ಯ |
| 11. | ತುಮಕೂರು | ತಾಲ್ಲೂಕು ಯೋಜನಾ ಅಧಿಕಾರಿ, ತುಮಕೂರು |
| 12. | ಉತ್ತರ ಕನ್ನಡ | ತಾಲ್ಲೂಕು ಯೋಜನಾ ಅಧಿಕಾರಿ, ಯಲ್ಲಾಪುರ |
| 13. | ಚಿತ್ರದುರ್ಗ | ತಾಲ್ಲೂಕು ಯೋಜನಾ ಅಧಿಕಾರಿ, ಚಿತ್ರದುರ್ಗ |

**ಜ್ಯೋತಿ ಆರ್.ಜೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್–5).

**P.R. 249**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ರಾಜ್ಯದಲ್ಲಿ ಈಗಾಗಲೇ ಸೃಜಿಸಲಾಗಿರುವ ತಾಲ್ಲೂಕು ಯೋಜನಾ ಘಟಕಗಳ ಜೊತೆಗೆ ಉಳಿದ 69 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಹೊಸದಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಪಿಡಿ 102 ಎಸ್‌ಎಂಸಿ 2007, ದಿನಾಂಕ : 11–6–2007
2. ಸರ್ಕಾರದ ಆದೇಶ ಸಂಖ್ಯೆ : ಪಿಡಿ 15 ಎಸ್‌ಎಂಸಿ 2010, ದಿನಾಂಕ : 22–11–2010

**ಪ್ರಸ್ತಾವನೆ :**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ಸೆಕ್ಷನ್ 309 (2) ರಲ್ಲಿ ಪ್ರತಿ ತಾಲ್ಲೂಕಿಗೂ ಅಭಿವೃದ್ಧಿ ಯೋಜನೆಯನ್ನು ತಯಾರಿಸಲು ಹೇಳಲಾಗಿದೆ. ಡಾ॥ ಡಿ.ಎಂ. ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಪ್ರಾದೇಶಿಕ ಅಸಮತೋಲನಾ ನಿವಾರಣಾ ಉನ್ನತಾಧಿಕಾರಿ ಸಮಿತಿಯು ರಾಜ್ಯದಲ್ಲಿ ಗುರುತಿಸಿರುವ ಒಟ್ಟು 114 ಅತೀ ಹಿಂದುಳಿದ, ಅತ್ಯಂತ ಹಿಂದುಳಿದ ಮತ್ತು ಹಿಂದುಳಿದ ತಾಲ್ಲೂಕುಗಳ ಪೈಕಿ, 64 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಾಗೂ ಸಚಿವ ಸಂಪುಟದ ಅನುಮೋದನೆಯೊಂದಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದನ್ವಯ ಈಗಾಗಲೇ ಸೃಜಿಸಲಾಗಿದೆ ಪ್ರಸ್ತುತ ಇವುಗಳು 39 ಅತೀ ಹಿಂದುಳಿದ, 17 ಅತ್ಯಂತ ಹಿಂದುಳಿದ, 4 ಹಿಂದುಳಿದ ತಾಲ್ಲೂಕುಗಳಲ್ಲಿ ಮತ್ತು 4 ಇತರೆ ತಾಲ್ಲೂಕುಗಳಲ್ಲಿ ಕಾರ್ಯನಿರ್ವಹಿಸುತ್ತಿದೆ. ಪ್ರತಿ ತಾಲ್ಲೂಕು ಯೋಜನಾ ಘಟಕವು ಸಮೂಹ 'ಬಿ' ವೃಂದದ ಒಬ್ಬ ತಾಲ್ಲೂಕು ಯೋಜನಾಧಿಕಾರಿಯನ್ನು ಹಾಗೂ ಸಮೂಹ 'ಸಿ' ವೃಂದದ ಒಬ್ಬ ಪ್ರಗತಿ ಸಹಾಯಕರನ್ನು ಒಳಗೊಂಡಿರುತ್ತದೆ. ಈ ತಾಲ್ಲೂಕು ಯೋಜನಾ ಘಟಕವು ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತದೆ.

ಮೇಲ್ಕಾಣಿಸಿದ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1197 ವೆಚ್ಚ–7 2006 ದಿನಾಂಕ: 17–2–2007ರಲ್ಲಿ ಸಹಮತಿಯನ್ನು ನೀಡುವ ಸಮಯದಲ್ಲಿ ಈಗ ಮಂಜೂರಾಗಿರುವ ಘಟಕಗಳ ಕಾರ್ಯನಿರ್ವಹಣೆಯನ್ನು ಗಮನಿಸಿ ಉಳಿದ ತಾಲ್ಲೂಕುಗಳಿಗೂ

ಈ ನಿರ್ಣಯವನ್ನು ವಿಸ್ತರಿಸಲು ಕ್ರಮ ವಹಿಸಬಹುದೆಂದು ಅಭಿಪ್ರಾಯ ಪಟ್ಟಿರುತ್ತದೆ. ಮುಂದುವರೆದು, ಎಲ್ಲಾ ಜಿಲ್ಲಾ ಪಂಚಾಯತ್‌ಗಳು ತಮ್ಮ ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸುವಂತೆ ಕೋರಿಕೊಂಡಿರುತ್ತವೆ.

ವಿಧಾನಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಕೆ ಪ್ರತಾಪ ಚಂದ್ರ ಶೆಟ್ಟಿ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 124/2008 ಕ್ಕೆ ಸರ್ಕಾರವು ಉತ್ತರ ನೀಡುವಾಗ " ಪ್ರಸ್ತುತ ಸೃಜಿಸಲಾದ 64 ತಾಲ್ಲೂಕು ಯೋಜನಾ ಘಟಕಗಳ ಕಾರ್ಯನಿರ್ವಹಣೆ ಮತ್ತು ಅವುಗಳ ಉಪಯುಕ್ತತೆ, ಇತ್ಯಾದಿಗಳನ್ನು ಪರಿಶೀಲಿಸಿದ ನಂತರ ಇನ್ನುಳಿದ ತಾಲ್ಲೂಕುಗಳಲ್ಲಿ ಯೋಜನಾ ಘಟಕಗಳನ್ನು ಸೃಜಿಸುವ ಪ್ರಸ್ತಾವನೆಯನ್ನು ಕೈಗೆತ್ತಿಕೊಳ್ಳಲಾಗುವುದೆಂದು" ಹೇಳಿರುತ್ತದೆ. ಸರ್ಕಾರದ ಈ ಉತ್ತರವು ವಿಧಾನ ಪರಿಷತ್ತಿನ ಭರವಸೆ ಸಂಖ್ಯೆ : 2958/2008 ಎಂದು ಸರ್ಕಾರದ ಭರವಸೆಯಾಗಿ ಪರಿಣಮಿಸಿರುತ್ತದೆ.

ಮೇಲ್ಕಾಣಿಸಿದಂತೆ ಗುರುತಿಸಲಾದ 114 ತಾಲ್ಲೂಕುಗಳ ಪೈಕಿ ಉಳಿದಿರುವ ಎಲ್ಲಾ 23 ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಮತ್ತು 20 ಹಿಂದುಳಿದ ತಾಲ್ಲೂಕಗಳಲ್ಲಿ ಈ ರೀತಿಯಾಗಿ ಒಟ್ಟು 43 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು 2ನೇ ಹಂತವಾಗಿ ಪ್ರಾರಂಭಿಸಲು ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಉಲ್ಲೇಖಿತ (2) ರಲ್ಲಿ ಓದಲಾದ ಆದೇಶದನ್ವಯ ಸೃಜಿಸಲಾಗಿದೆ.

ಪ್ರಸ್ತುತ ರಾಜ್ಯದಲ್ಲಿ ಇನ್ನುಳಿದ 69 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಆರ್ಥಿಕ ಇಲಾಖೆಯ ಸಹಮತಿ ಪಡೆಯಲಾಗಿದ್ದು. ಆರ್ಥಿಕ ಇಲಾಖೆಯು ಇನ್ನುಳಿದ 69 ತಾಲ್ಲೂಕುಗಳಲ್ಲಿ ತಾಲ್ಲೂಕು ಯೋಜನಾ ಘಟಕಗಳನ್ನು ಸೃಜಿಸಲು ಒಪ್ಪಿಗೆ ನೀಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಪಿಡಿ 230 ಎಸ್‌ಎಂಸಿ 2010, ಬೆಂಗಳೂರು, ದಿನಾಂಕ : 18-2-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ರಾಜ್ಯದಲ್ಲಿ ಇನ್ನುಳಿದ 69 ತಾಲ್ಲೂಕುಗಳಲ್ಲಿ 3ನೇ ಹಾಗೂ ಅಂತಿಮ ಹಂತವಾಗಿ ತಾಲ್ಲೂಕು ಯೋಜನಾ ಘಟಕಗಳನ್ನು ಕೆಳಕಂಡ ತಾಲ್ಲೂಕು ಪಂಚಾಯತ್‌ಗಳಲ್ಲಿ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಿ ಆದೇಶಿಸಲಾಗಿದೆ (ಅನುಬಂಧ-1 ರಲ್ಲಿರುವಂತೆ).

ಅದರಂತೆಯೇ ಸಂಬಂಧಪಟ್ಟ ಆಯಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ತಾಲ್ಲೂಕು ಪಂಚಾಯತ್‌ಗಳ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ತಾಲ್ಲೂಕು ಯೋಜನಾಧಿಕಾರಿಗೆ ಹುದ್ದೆಗೆ ಅಗತ್ಯವಿರುವ ವೇತನ ಮತ್ತು ಇತರೆ ಭತ್ಯೆಗಳಿಗಾಗಿ ಅನುದಾನವನ್ನು ಒದಗಿಸಿಕೊಳ್ಳಲು ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ತಾಲ್ಲೂಕು ಯೋಜನಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿರುವಂತೆ ತಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸತಕ್ಕದ್ದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 98 ವೆಚ್ಚ-6 2012, ದಿನಾಂಕ : 30-10-2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜ್ಯೋತಿ ಆರ್.ಜೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್-5).

**ಸರ್ಕಾರದ ಆದೇಶ ಸಂಖ್ಯೆ : ಪಿಡಿ 230 ಎಸ್‌ಎಂಪಿ 2010, ಬೆಂಗಳೂರು, ದಿನಾಂಕ : 18-2-2013 ರ (ಅನುಬಂಧ-1)**

**ರಾಜ್ಯದಲ್ಲಿ ಮೂರನೇ ಹಾಗೂ ಅಂತಿಮ ಹಂತವಾಗಿ ಸೃಜಿಸಲಾದ 69 ತಾಲ್ಲೂಕು ಯೋಜನಾ ಘಟಕಗಳು**

| ಕ್ರ. ಸಂ. | ಜಿಲ್ಲೆ | ಹೊಸದಾಗಿ ಸೃಜಿಸಲಾದ ತಾಲ್ಲೂಕು ಯೋಜನಾ ಘಟಕಗಳು | |
|---|---|---|---|
| | | ಅತ್ಯಂತ ಹಿಂದುಳಿದ ತಾಲ್ಲೂಕುಗಳು | ಇತರೆ ತಾಲ್ಲೂಕುಗಳು |
| 1. | ಬಳ್ಳಾರಿ | | 1. ಬಳ್ಳಾರಿ |
| | | | 2. ಹೊಸಪೇಟೆ |
| 2. | ಬೀದರ್ | | 3. ಬೀದರ್ |
| 3. | ಬೆಂಗಳೂರು (ಗ್ರಾ) | | 4. ದೇವನಹಳ್ಳಿ<br>5. ದೊಡ್ಡಬಳ್ಳಾಪುರ<br>6. ನೆಲಮಂಗಲ |
| 4. | ಬೆಂಗಳೂರು ನಗರ | | 7. ಬೆಂಗಳೂರು ಉತ್ತರ<br>8. ಬೆಂಗಳೂರು ದಕ್ಷಿಣ<br>9. ಬೆಂಗಳೂರು ಪೂರ್ವ |
| 5. | ಬೆಳಗಾಂ | | 10. ಬೆಳಗಾಂ<br>11. ಚಿಕ್ಕೋಡಿ<br>12. ಖಾನಾಪುರ |
| 6. | ಬಾಗಲಕೋಟೆ | | 13. ಬಾಗಲಕೋಟೆ<br>14. ಜಮಖಂಡಿ<br>15. ಮುಧೋಳ |

| ಕ್ರ. ಸಂ. | ಜಿಲ್ಲೆ | ಹೊಸದಾಗಿ ಸೃಜಿಸಲಾದ ತಾಲ್ಲೂಕು ಯೋಜನಾ ಘಟಕಗಳು | |
|---|---|---|---|
| | | ಅತ್ಯಂತ ಹಿಂದುಳಿದ ತಾಲ್ಲೂಕುಗಳು | ಇತರೆ ತಾಲ್ಲೂಕುಗಳು |
| 7. | ಚಿತ್ರದುರ್ಗ | | 16. ಚಿತ್ರದುರ್ಗ |
| 8. | ಚಿಕ್ಕಮಗಳೂರು | | 17. ಚಿಕ್ಕಮಗಳೂರು<br>18. ಕೊಪ್ಪ<br>19. ಶೃಂಗೇರಿ<br>20. ಎನ್.ಆರ್. ಪುರ<br>21. ಮೂಡಿಗೆರೆ |
| 9. | ಚಾಮರಾಜನಗರ | | 22. ಯಳಂದೂರು |
| 10. | ಚಿಕ್ಕಬಳ್ಳಾಪುರ | 1. ಚಿಂತಾಮಣಿ | 23. ಚಿಕ್ಕಬಳ್ಳಾಪುರ |
| 11. | ಕೋಲಾರ | 2. ಶಿಡ್ಲಘಟ್ಟ<br>3. ಬಂಗಾರಪೇಟೆ | 24. ಕೋಲಾರ |
| 12. | ಧಾರವಾಡ | | 25. ಧಾರವಾಡ<br>26. ಹುಬ್ಬಳ್ಳಿ |
| 13. | ದಾವಣಗೆರೆ | | 27. ದಾವಣಗೆರೆ<br>28. ಹರಿಹರ |
| 14. | ಗದಗ | | 29. ಗದಗ<br>30. ನರಗುಂದ |
| 15. | ಹಾವೇರಿ | | 31. ರಾಣಿಬೆನ್ನೂರು |
| 16. | ಹಾಸನ | 4. ಬೇಲೂರು<br>5. ಚನ್ನರಾಯಪಟ್ಟಣ | 32. ಆಲೂರು<br>33. ಹಾಸನ<br>34. ಸಕಲೇಶಪುರ |
| 17. | ಮೈಸೂರು | 6. ಪಿರಿಯಾಪಟ್ಟಣ<br>7. ಕೆ.ಆರ್. ನಗರ | 35. ಮೈಸೂರು |
| 18. | ಮಂಡ್ಯ | 8. ಶ್ರೀರಂಗಪಟ್ಟಣ<br>9. ಮದ್ದೂರು<br>10. ಪಾಂಡವಪುರ | 36. ಮಂಡ್ಯ |
| 19. | ರಾಮನಗರ | 11. ಚನ್ನಪಟ್ಟಣ | 37. ರಾಮನಗರ |
| 20. | ಶಿವಮೊಗ್ಗ | | 38. ಭದ್ರಾವತಿ<br>39. ಹೊಸನಗರ<br>40. ಸಾಗರ<br>41. ಶಿವಮೊಗ್ಗ<br>42. ತೀರ್ಥಹಳ್ಳಿ |
| 21. | ತುಮಕೂರು | | 43. ತುಮಕೂರು<br>44. ತಿಪಟೂರು |
| 22. | ಉತ್ತರ ಕನ್ನಡ | | 45. ಹಳಿಯಾಳ<br>46. ಹೊನ್ನಾವರ<br>47. ಕಾರವಾರ<br>48. ಕುಮಟ<br>49. ಮುಂಡಗೋಡು<br>50. ಶಿರಸಿ<br>51. ಯಲ್ಲಾಪುರ |
| 23. | ಉಡುಪಿ | | 52. ಕಾರ್ಕಳ<br>53. ಉಡುಪಿ |
| 24. | ಕೊಡಗು | | 54. ಮಡಿಕೇರಿ |

| ಕ್ರ. ಸಂ. | ಜಿಲ್ಲೆ | ಹೊಸದಾಗಿ ಸೃಜಿಸಲಾದ ತಾಲ್ಲೂಕು ಯೋಜನಾ ಘಟಕಗಳು | |
|---|---|---|---|
| | | ಅತ್ಯಂತ ಹಿಂದುಳಿದ ತಾಲ್ಲೂಕುಗಳು | ಇತರೆ ತಾಲ್ಲೂಕುಗಳು |
| 25. | ದಕ್ಷಿಣ ಕನ್ನಡ | | 55. ಬೆಳ್ತಂಗಡಿ<br>56. ಬಂಟ್ವಾಳ<br>57. ಮಂಗಳೂರು<br>58. ಸುಳ್ಯ |
| | ಒಟ್ಟು | 11 | 58 |

ಜ್ಯೋತಿ ಆರ್.ಜೆ.
ಸರ್ಕಾರದ ಅಧೀನ ಕಾರ್ಯದರ್ಶಿ,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್–5).

**P.R. 250**

## ENERGY SECRETARIAT

**Sub :** Implementation of "Roof Top Solar Scheme" by Karnataka Renewable Energy Development Limited (KREDL) in the State.

**PREAMBLE :**

1. In order to promote ecologically sustainable growth of renewable energy in cities of Karnataka, KREDL proposes to launch Roof Top Solar Scheme. It is proposed to harvest natural resources i.e., Solar Energy at micro level. Under this Roof Top Solar Scheme it is proposed to generate Solar Energy by installing a Solar Scheme generation system on the roof top of the building to generate energy ranging from 0.5Kwh to 1.00Kwh for domestic consumption. The generated power will be used for captive consumption. The scheme is proposed to be implemented in households as well as on experimental basis in apartment buildings. Based on the success· of pilot project, the project will be expanded to cover all cities in the State in a phased manner. The scheme would be implemented in Bangalore, Mysore, Hubli, Mangalore and Gulbarga as a pilot project with 50% subsidy to be utilized in Bangalore, while rest to be equally divided in other 4 cities. The beneficiary will be selected on first come first serve basis and each beneficiary will be entitled to a maximum of subsidy of 50% of the cost of the system (from the State Government through KREDL - 20% and from MNRE upto 30%).
2. The State Government has provided an amount of Rs. 7 crores for the new scheme of "Roof Top Solar Project" for implementation during 2012-13 under the Head of Account "4801-80-190-0-04.
3. The main objective of the scheme is to create awareness and demonstrate effective and innovative use of solar systems for individual/community. Under this Roof top Solar Photovoltaic system scheme, households will be energized by solar system ranging from 0.5 Kwh to 1.00 Kwh to avail capital subsidy. The present benchmark cost of Solar Photovoltaic System as per the guidelines of the MNRE, is Rs. 2.70 lakhs per Kwh. Further, according to the MNRE guidelines a beneficiary who installs Roof Top Solar system is entitled to a subsidy upto 30% of the total cost of the project from MNRE. In view of this fact, MNRE is subsidizing to an extent of 30% of the total cost, it is proposed to give 20% of the total cost of the system from the State Budget and balance 50% is to be borne by the beneficiary.
4. Keeping this sharing pattern in VIew, the total project cost would be as follows:-

| **Roof Top Solar PV System** | | |
|---|---|---|
| State Subsidy Share | INR 7.00 Cr | 20% subsidy by state government |
| MNRE Subsidy Share | INR 10.50 Cr | Upto 30% subsidy by MNRE as per their scheme. |
| Total Subsidy | INR 17.50 Cr | Total subsidy -50% of the cost of the system. |
| User Share | INR 17.50 Cr | 50% of the cost of the system |
| Total Project Cost | INR 35.00 Cr | Total Subsidy of 50%<br>Beneficiary Share 50% |

5. KREDL would implement the project initially in 5 cities, i.e., Bangalore, Mysore, Hubli, Mangalore and Gulbarga as a pilot project and the overall responsibility of allocation and disbursement of subsidy and identification of programme implementation agency is done by KREDL based on open tender system. The programme implementing agency will be responsible for installation of the system. An independent agency will be identified by KREDL through tender process which will verify and report on the implementation of the scheme.

After detailed examination of the proposal, the following order is issued

**GOVERNMENT ORDER NO. EN 21 PSR 2012(P2) BANGALORE, DATE: 30.01.2013**

In view of the facts explained above, Government accords approval for implementing "Roof top Solar Scheme" system by KREDL covering approximately 1950 beneficiaries in Bangalore, Mysore, Hubli, Mangalore and Gulbarga at a total cost of Rs.35 crores which includes State share of Rs.7.00 crores (Rupees seven crores only) as detailed in the Annexure, during the current Financial Year 2012-13.

KREDL is authorized to proceed further in the matter duly following KTPP Act.

This order is issued with the concurrence of Finance Department vide note No: FD 877 Exp.1/2012 dated 30.08.2012 and Planning Department vide note No: PD10 MCM 2012 dated 11.07.2012.

By Order and in the name of the Governor of Karnataka,
**A.A. CHAPPARBAND,**
Under Secretary to Government,
Energy Department.

## Annexure:

In pursuance to Kamataka renewable energy policy, KREDL proposes to launch grid connected solar roof top scheme to promote ecologically sustainable growth of renewable energy in cities of Karnataka while addressing India's energy security challenge.

The objective of the scheme is to pilot the Roof-top Solar PV system in selected cities and demonstrate them as model projects for others to follow. The generated power will be used for captive consumption. The scheme will pilot the project in urban households as well as experimental basis in apartment buildings. Based on success of the pilot project, the project would be expanded to cover all cities in Kamataka.

The scheme would be implemented in Bangalore, Mysore, Mangalore, Hubli and Gulbarga region as a pilot project with upto 50% of subsidy funds to be utilized in Bangalore, while rest to equally divide in other four cities. The beneficiary would be selected on first cum first serve basis and each beneficiary will be entitled to a maximum subsidy of 50% of the cost of the system, with breakup of upto 30% by MNRE under MNRE guidelines and 20% by KREDL under state government subsidy.

**1. Budget**

| | | |
|---|---|---|
| State Subsidy Share | INR 7.00 Cr | 20% subsidy by state government |
| MNRE Subsidy Share | INR 10.50 Cr | Upto 30% subsidy by MNRE as per their scheme. |
| Total Subsidy | INR 17.50 Cr | Total subsidy -50% of the cost of the system. |
| User Share | INR 17.50 Cr | 50% of the cost of the system |
| Total Project Cost | INR 35.00 Cr | Total Subsidy of 50%<br>Beneficiary Share 50% |

**2. Costing and Power Savings**

| | | |
|---|---|---|
| Total MNRE and State Subsidy Share | INR 17.50 Cr | |
| | 1 Kw System* | 0.5 KW System* |
| Watt Capacity | 1000 watts | 500 watts |
| Cost Per Unit | Rs 2,70,000 | Rs 1,35,000 |
| Physical Targets* (Assuming 50% applications are for 1 KW system and 50% applications are for 0.5 KW system) | 649 No's | 1300 No's |
| * Based on beneficiary application and verification of need 0.5 KW – 1 KW systems will be provided. | | |
| Power Saving | 1 KW System | 0.5 KW System |
| Usage Per Day (hrs/ day) | 5hrs/day | 2.5hrs/day |
| Power Saving/annum(Kwh) [assuming 250 sunny days/year | 8,11,250 Kwh | 8,12,500 Kwh |
| Unit Cost per KWh | Rs. 4.50 | Rs. 4.50 |
| Total Savings (Rs)/year | Rs. 36,50,625 | Rs. 36,56,250 |
| **Total Savings of 1 KW system & 0.5 KW system per year** | **Rs. 73,06,875** | |

**3. Timelines**

| Activities | Duration (Wks) | Wk1 | Wk2 | Wk3 | Wk4 | Wk5 | Wk6 | Wk7 |
|---|---|---|---|---|---|---|---|---|
| Preparation of Scheme Document | 2 | | | | | | | |
| Approval of Scheme by State and MNRE | 2 | | | | | | | |
| Bid document preparation & approval | 1 | | | | | | | |
| Bidding period and work order issue | 2 | | | | | | | |
| **Total Duration (Wks)** | 7 | | | | | | | |

| | |
|---|---|
| Plan | • KREDL to prepare scheme details<br>• Finalize project costing, list of beneficiaries,<br>• Obtaln approval and funding from state & MNRE<br>• Invite tender, identify project implementing and verification agencies. |
| | |
| Implementation | • Project to be implemented by independent empanelled service provider (implementing agency)<br>• Implementlng partner to be identified through open tender<br>• All terms and conditions mentioned in scheme, in MNRE guidelines to be responsibility of implementing agency |
| | |
| Monitoring | • Project to be monitored by KREDL<br>• KREDL either directly or through agencies monitor the progress of the project after work order is awarded and ensure that it gets rolled out and completed as scheduled.<br>• KREDL to send progress reports to concerned stakeholders |
| | |
| Vetrification and Reporting | • Verification to be conducted under KREDL purview, through an independent agency.<br>• Agency to be identified through open tender. |

## GUIDELINES FOR SOLAR ROOFTOP PROJECT

**1. Background**

Karnataka Renewable Energy Development Ltd. (KREDL) is an organization devoted entirely to the promotion of non-conventional energy sources in Karnataka. The organization aim is to promote projects for harnessing energy form wind, small hydro, biomass, solar energy and energy recovery from wastes through private investment.

Government of Karnataka together with the Ministry of New and Renewable Energy (MNRE), Government of India has introduced a subsidy linked solar roof top PV system for households and apartment in cities.

**2. Objective**

i. To create awareness and demonstrate effective and innovative use of Solar systems for individual/ community.

ii. The Government would develop a programmatic approach within which supplier would implement the programme in various households

iii. To promote applications of solar energy for meeting the targets set in the Jawaharlal Nehru National Solar Mission

iv. To encourage innovation in addressing market needs and promoting sustainable business models.

v. To create a paradigm shift needed for commoditization of decentralized solar applications.

**3. Scope of Scheme**

i. The scheme would be applicable to selected cities - Bangalore, Mysore, Mangalore, Hubli and Gulbarga and would focus on promoting decentralized systems to meet/ supplement lightning, electricity/power, heating and cooling energy requirements.

ii. Under the Roof-top Solar Photo Voltaic system households with connected load of up to lKw will be eligible to apply/avail capital subsidy.

Joint Director, DIC, Mandya, withdrew the Fixed Assets Valuation certificate vide No. ಜಿಕೈಕೇ/ಮಂ/ಕ/ತೆಮಿ/2010-11/245, dated : 08-12-2010 with retrospective effect i.e. from 15-06-1998.

The withdrawal of the Certificate has been effected in view of the decision taken in the 102nd SHLCC meeting held on 01-10-2010. Now this office has been asked by the Hon'ble High Court to re-examine the process of withdrawal under the existing rules.

As seen from the Industrial Policy 1993-98 document, Sugar Manufacturing had been considered as thrust sector industry at that time and as per 5.0, 5.1 & 5.2 of the policy documents, the thrust sector industries were eligible for enhanced sales tax related concessions. There is no mention of the denial of incentives in the policy document on account of availment of sugarcane purchase tax deferral facility.

Commissioner for Industrial Development and Director for Industries and Commerce was requested to offer his opinion on the matter vide this office letter no. CI 103 SPI 2011, dated : 09-01-2012. Commissioner for Industrial Development and Director for Industries and Commerce has offered his opinion vide his letter No. ಕೈವಾಇ/ಕೈಅ/ಇ2/ಜಾಶುಲಿ–ಪ್ರತೆವಿ/25/2010/11, dated : 20-02-2013, he has opined that in view of the non eligibility clause for availing incentives under Industrial policy 1993-98 for sugar factories availing sugar purchase tax deferment facility and the subsequent Government order No. CI 254 SGF 1996, dated : 01-08-1997. The sugar factories during the policy period 1993-98 were eligible to get both sugarcane purchase tax deferment facility as well as sales tax exemption facility on the end products.

Government has examined the request of the project proponents, opinion of Commissioner for Industrial Development and Director for Industries and Commerce and the policy guidelines of Industrial policy 1993-98 and Government order No. CI 254 SGF 1996, dated : 01-08-1997 in detail.

Hence the following order.

**GOVERNMENT ORDER NO. CI 103 SPI 2011, BANGALORE, DATED : 23-02-2013.**

In the circumstances explained above, Government is pleased to order that M/s Chamundeshwari Sugars Ltd., Bharathi Nagar, Maddur Taluk, Mandya District was eligible to avail both sugarcane purchase tax deferment facility and sales tax exemption facility on the end products as per Industrial policy 1993-98 and Government order No. CI 254 SGF 1996, dated: 01-08-1997.

In view of the above, FAVC granted to M/s Chumundeshwari Sugars Ltd., Bharathi Nagar, Maddur Taluk, Mandya District was in order. Commissioner for Industrial Development and Director for Industries and Commerce is requested to direct the concerned to withdraw the order No. ಜಿಕೈಕೇ/ಮಂ/ಕ/ತೆಮಿ/2010-11/245, dated : 08-12-2010.

By Order and in the Name of the Governor of Karnataka
**SHIVASHANKAR NAIK L.**
Desk Officer (Technical Cell),
Commerce & Industries Department.

**P.R. 344**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ 100 ಸಂಖ್ಯಾಬಲದ 10 ಹೊಸ ಹಾಗೂ ಅತಿ ಹೆಚ್ಚು ಸಂಖ್ಯಾಬಲವುಳ್ಳ ವಿದ್ಯಾರ್ಥಿನಿಲಯಗಳನ್ನು ವಿಭಜಿಸಿ 40 ಮೆಟ್ರಿಕ್ ನಂತರದ ಪುರುಷ / ಮಹಿಳೆಯರ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಹಿಂಬಕನಿ/ವನಿಶಾ–2/ಸಿಆರ್–75/2012–13, ದಿನಾಂಕ : 17–09–2012.

**ಪ್ರಸ್ತಾವನೆ :**

2012–13ನೇ ಸಾಲಿನಲ್ಲಿ ತಲಾ 100 ವಿದ್ಯಾರ್ಥಿಗಳ ಸಂಖ್ಯಾಬಲವುಳ್ಳ 10 ನೂತನ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮತ್ತು ಈಗಾಗಲೇ ನಿರ್ವಹಣೆ ಮಾಡಲಾಗುತ್ತಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲ ಹೆಚ್ಚಾಗಿದ್ದು. ನಿರ್ವಹಣೆ ದೃಷ್ಟಿಯಿಂದ ಇಂತಹ 40 ವಿದ್ಯಾರ್ಥಿನಿಲಯಗಳನ್ನು ವಿಭಜನೆ ಮಾಡಲು ಮಂಜೂರಾತಿಯನ್ನು ಕೋರಿ ಆಯುಕ್ತರು. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಓದಲಾದ ಏಕ ಕಡತದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ : 18/10/2012ರಂದು ಗುಲ್ಬರ್ಗಾದಲ್ಲಿ ಜರುಗಿದ ಸಚಿವ ಸಂಪುಟ ಸಭೆಯಲ್ಲಿ ಹಿಂದುಳಿದ ವರ್ಗಗಳ 50 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ಹೆಚ್ಚುವರಿಯಾಗಿ ಪ್ರಾರಂಭಿಸುವ ವಿಷಯದಲ್ಲಿ ಹಾಗೂ ಸ್ಥಳ ನಿಗಧೀಕರಣ ಮಾಡುವ ವಿಷಯದಲ್ಲಿ ಸೂಕ್ತ ತೀರ್ಮಾನಗಳನ್ನು ತೆಗೆದುಕೊಳ್ಳಲು ಸಚಿವ ಸಂಪುಟವು ಮಾನ್ಯ ಮುಖ್ಯಮಂತ್ರಿಗಳಿಗೆ ಅಧಿಕಾರವನ್ನು ನೀಡಿರುತ್ತದೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, 10 ಹೊಸ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಹಾಗೂ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಹೆಚ್ಚಿನ ಸಂಖ್ಯಾಬಲ ಇರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ವಿಭಜಿಸಿ. 40 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಬಿಸಿಡಬ್ಲ್ಯೂ 336 ಬಿಎಂಎಸ್ 2012, ಬೆಂಗಳೂರು, ದಿನಾಂಕ : 14ನೇ ಫೆಬ್ರವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1ರಲ್ಲಿ ತಿಳಿಸಿರುವ ಸ್ಥಳಗಳಲ್ಲಿ 10 ಮೆಟ್ರಿಕ್ ನಂತರದ ಪುರುಷ / ಮಹಿಳೆಯರ ವಿದ್ಯಾರ್ಥಿ ನಿಲಯಗಳನ್ನು ಹೊಸದಾಗಿ ಪ್ರಾರಂಭಿಸಲು. ಹಾಗೂ ಈಗಾಗಲೇ ನಿರ್ವಹಣೆ ಮಾಡಲಾಗುತ್ತಿರುವ 40 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಬಲ ಹೆಚ್ಚಾಗಿದ್ದು. ನಿರ್ವಹಣೆ ದೃಷ್ಟಿಯಿಂದ ಅನುಬಂಧ-2 ರಲ್ಲಿರುವಂತೆ ವಿಭಜನೆ ಮಾಡಿ ಸಂಖ್ಯಾಬಲವನ್ನು ಮರುನಿಗದಿಪಡಿಸಿ ಆದೇಶಿಸಿದೆ. ಪ್ರತಿ ವಿದ್ಯಾರ್ಥಿನಿಲಯಗಳಿಗೆ ಈ ಕೆಳಗಿನಂತೆ ವಿವಿಧ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ವಿವರ | ವೇತನ ಶ್ರೇಣಿ ರೂ. | ಒಂದು ವಿದ್ಯಾರ್ಥಿ ನಿಲಯಕ್ಕೆ ನಿಗದಿಪಡಿಸಿದ ಹುದ್ದೆಗಳ ಸಂಖ್ಯೆ |
|---|---|---|---|
| 1 | ನಿಲಯ ಪಾಲಕ | 14,550-26,700 | 1 |
| 2 | ಅಡುಗೆಯವರು | 10,400-16,400 | 3 |
| 3 | ಅಡುಗೆ ಸಹಾಯಕರು | 9,600-14,550 | 2 |
| 4 | ರಾತ್ರಿ ಕಾವಲುಗಾರರು (ಮಹಿಳಾ ವಿದ್ಯಾರ್ಥಿ ನಿಲಯಗಳಿಗೆ ಮಾತ್ರ) | 9,600-14,550 | 1 |
| | | **ಒಟ್ಟು** | 7 |

10 ಹೊಸ ವಿದ್ಯಾರ್ಥಿನಿಲಯಗಳ ನಿರ್ವಹಣೆಗೆ ತಗಲುವ ವೆಚ್ಚವನ್ನು ರಾಜ್ಯವಲಯ ಯೋಜನೆಯಡಿಯ **"ಲೆಕ್ಕ ಶೀಷಿಕೆ 2225-03-277-2-53"** ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ**"** ಅಡಿ ಹಾಗೂ ವಿಭಜನೆ ಮಾಡಿರುವ 40 ವಿದ್ಯಾರ್ಥಿನಿಲಯಗಳ ನಿರ್ವಹಣೆಯನ್ನು ಜಿಲ್ಲಾ ವಲಯ ಯೋಜನೆ/ಯೋಜನೇತರ ಲೆಕ್ಕ ಶೀರ್ಷಿಕೆ 2225-00-103-0-26 ರಡಿ ಭರಿಸತಕ್ಕದ್ದು ಮತ್ತು ಇವುಗಳನ್ನು 2013-14ನೇ ಸಾಲಿನಿಂದ ಅನ್ವಯಿಸುವಂತೆ ಪ್ರಾರಂಭಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 758 ವೆಚ್ಚ 3/12, ದಿನಾಂಕ: 29-09-2012ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ-2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು

**ಸರ್ಕಾರದ ಆದೇಶ ಸಖ್ಯೆ : ಬಿಸಿಡಬ್ಲ್ಯೂ 336 ಬಿಎಂಎಸ್ 2012, ದಿನಾಂಕ : 14-02-2013ಕ್ಕೆ**

**ಅನುಬಂಧ-1**

**ಹೊಸದಾಗಿ ಮಂಜೂರು ಮಾಡಿರುವ 100 ಸಂಖ್ಯಾಬಲದ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ವಿವರ.**

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಕ್ರ.ಸಂ. | ಸ್ಥಳ | ಪುರುಷ/ಮಹಿಳೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | ಬಾಗಲಕೋಟೆ | ಬಾಗಲಕೋಟೆ | 1 | ಬಾಗಲಕೋಟೆ | ಪುರುಷ | 100 |
| 2 | ಬಿಜಾಪುರ | ಬಿಜಾಪುರ | 2 | ಬಿಜಾಪುರ | ಪುರುಷ | 100 |
| 3 | ಹಾವೇರಿ | ಹಾವೇರಿ | 3 | ಹಾವೇರಿ ಟೌನ್ | **ಮಹಿಳೆ** | 100 |
| | | ಹಿರೇಕೆರೂರು | 4 | ಹಿರೇಕೆರೂರು | ಪುರುಷ | 100 |
| 4 | ಗದಗ್ | ರೋಣ | 5 | ರೋಣ | ಪುರುಷ | 100 |
| | | ಶಿರಹಟ್ಟಿ | 6 | ಲಕ್ಷ್ಮೇಶ್ವರ | ಪುರುಷ | 100 |
| 5 | ಉತ್ತರ ಕನ್ನಡ | ಶಿರಸಿ | 7 | ಶಿರಸಿ ಟೌನ್ | **ಮಹಿಳೆ** | 100 |
| | | ಅಂಕೋಲ | 8 | ಅಂಕೋಲ | ಪುರುಷ | 100 |
| 6 | ಬಳ್ಳಾರಿ | ಬಳ್ಳಾರಿ | 9 | ಬಳ್ಳಾರಿ ನಗರ | **ಮಹಿಳೆ** | 100 |
| 7 | ಕೊಪ್ಪಳ | ಗಂಗಾವತಿ | 10 | ಗಂಗಾವತಿ | ಪುರುಷ | 100 |

**ಎಂ. ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ-2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು

**ಸರ್ಕಾರದ ಆದೇಶ ಸಖ್ಯೆ : ಬಿಸಿಡಬ್ಲ್ಯೂ 336 ಬಿಎಂಎಸ್ 2012, ದಿನಾಂಕ : 14–02–2013ಕ್ಕೆ**

**ಅನುಬಂಧ–2**

**2012–13ನೇ ಸಾಲಿನಲ್ಲಿ ಅತಿ ಹೆಚ್ಚು ಸಂಖ್ಯಾಬಲ ಇರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ವಿಭಜಿಸಲಾಗಿರುವ ಪಟ್ಟಿ**

| ಜಿಲ್ಲೆ | ಕ್ರ ಸಂ. | ಸ್ಥಳ | ಪುರುಷ/ ಮಹಿಳೆ | ಮೂಲ ಮಂಜೂರಾತಿ ಸಂಖ್ಯೆ | ಮೂಲ ವಿ.ನಿ.ಕ್ಕೆ ಮರುನಿಗಧಿ ಪಡಿಸಿದ ವಿದ್ಯಾರ್ಥಿಗಳ ಸಂಖ್ಯೆ | ಹೆಚ್ಚುವರಿ ವಿ.ನಿ.ಕ್ಕೆ ನಿಗಧಿ ಪಡಿಸಿರುವ ವಿದ್ಯಾರ್ಥಿಗಳ ಸಂಖ್ಯೆ | ಹೆಚ್ಚುವರಿ ವಿದ್ಯಾರ್ಥಿ ನಿಲಯಗಳ ಸಂಖ್ಯೆ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| ಬಳ್ಳಾರಿ | 1 | ಬಳ್ಳಾರಿ | ಪುರುಷ | 300 | 150 | 150 | 1 |
| | 2 | ಹೊಸಪೇಟೆ | ಪುರುಷ | 225 | 125 | 100 | 1 |
| | 3 | ಬಳ್ಳಾರಿ (ವೃತ್ತಿಪರ) | ಪುರುಷ | 200 | 100 | 100 | 1 |
| | 4 | ಕೂಡ್ಲಗಿ | ಪುರುಷ | 200 | 100 | 100 | 1 |
| | 5 | ಬಳ್ಳಾರಿ | **ಮಹಿಳೆ** | 200 | 100 | 100 | 1 |
| ಗುಲ್ಬರ್ಗಾ | 6 | ವಿಶ್ವವಿದ್ಯಾಲಯ | ಪುರುಷ | 275 | 150 | 125 | 1 |
| | 7 | ಗುಲ್ಬರ್ಗಾ (ಆರ್.ಟಿ.ಓ) | ಪುರುಷ | 225 | 125 | 100 | 1 |
| ರಾಯಚೂರು | 8 | ರಾಯಚೂರು | ಪುರುಷ | 275 | 150 | 125 | 1 |
| | 9 | ರಾಯಚೂರು (ವೃತ್ತಿಪರ) | ಪುರುಷ | 200 | 100 | 100 | 1 |
| | 10 | ಲಿಂಗಸುಗೂರು | **ಮಹಿಳೆ** | 175 | 100 | 75 | 1 |
| ಬೀದರ್ | 11 | ಬೀದರ್ | ಪುರುಷ | 225 | 125 | 100 | 1 |
| | 12 | ಬೀದರ್ (ವೃತ್ತಿಪರ) | ಪುರುಷ | 175 | 100 | 75 | 1 |
| ಕೊಪ್ಪಳ | 13 | ಕೊಪ್ಪಳ | ಪುರುಷ | 200 | 100 | 100 | 1 |
| | 14 | ಕೊಪ್ಪಳ | **ಮಹಿಳೆ** | 200 | 100 | 100 | 1 |
| | 15 | ಬಾಗಲಕೋಟೆ | ಪುರುಷ | 300 | 150 | 150 | 1 |
| | 16 | ಜಮಖಂಡಿ | ಪರುಷ | 235 | 125 | 110 | 1 |
| | 17 | ಗುಳೇದಗುಡ್ಡ | ಪುರುಷ | 200 | 100 | 100 | 1 |
| ಬಾಗಲಕೋಟೆ | 18 | ಬಾಗಲಕೋಟೆ (ವೃತ್ತಿಪರ) | **ಮಹಿಳೆ** | 200 | 100 | 100 | 1 |
| | 19 | ಮುಧೋಳ | **ಮಹಿಳೆ** | 200 | 100 | 100 | 1 |
| | 20 | ಬಾದಾಮಿ | **ಮಹಿಳೆ** | 175 | 100 | 75 | 1 |
| | 21 | ಜಮಖಂಡಿ | **ಮಹಿಳೆ** | 175 | 100 | 75 | 1 |
| ಬಿಜಾಪುರ | 22 | ಬಿಜಾಪುರ | ಪುರುಷ | 300 | 150 | 150 | 1 |
| | 23 | ಇಂಡಿ | ಪುರುಷ | 200 | 100 | 100 | 1 |
| | 24 | ಬಿಜಾಪುರ | **ಮಹಿಳೆ** | 200 | 100 | 100 | 1 |
| | 25 | ಧಾರವಾಡ | ಪುರುಷ | 275 | 150 | 125 | 1 |
| | 26 | ಕರ್ನಾಟಕ ವಿಶ್ವವಿದ್ಯಾಲಯ | ಪುರುಷ | 225 | 125 | 100 | 1 |
| ಧಾರವಾಡ | 27 | ಹುಬ್ಬಳ್ಳಿ (ಈಶ್ವರನಗರ) | ಪುರುಷ | 175 | 100 | 75 | 1 |
| | 28 | ಧಾರವಾಡ | **ಮಹಿಳೆ** | 175 | 100 | 75 | 1 |

| ಜಿಲ್ಲೆ | ಕ್ರ ಸಂ. | ಸ್ಥಳ | ಪುರುಷ/ ಮಹಿಳೆ | ಮೂಲ ಮಂಜೂರಾತಿ ಸಂಖ್ಯೆ | ಮೂಲ ವಿ.ನಿ.ಕ್ಕೆ ಮರುನಿಗಧಿ ಪಡಿಸಿದ ವಿದ್ಯಾರ್ಥಿಗಳ ಸಂಖ್ಯೆ | ಹೆಚ್ಚುವರಿ ವಿ.ನಿ.ಕ್ಕೆ ನಿಗಧಿ ಪಡಿಸಿರುವ ವಿದ್ಯಾರ್ಥಿಗಳ ಸಂಖ್ಯೆ. | ಹೆಚ್ಚುವರಿ ವಿದ್ಯಾರ್ಥಿ ನಿಲಯಗಳ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| ಧಾರವಾಡ | 29 | ಧಾರವಾಡ (ವೃತ್ತಿಪರ) | ಮಹಿಳೆ | 175 | 100 | 100 | 1 |
| | 30 | ಧಾರವಾಡ (ವೃತ್ತಿಪರ) | ಮಹಿಳೆ | 200 | 100 | 75 | 1 |
| ಬೆಳಗಾಂ | 31 | ಕಸಬುರ್ಗಿ | ಪುರುಷ | 175 | 100 | 75 | 1 |
| | 32 | ಗೋಕಾಕ | ಪುರುಷ | 175 | 100 | 75 | 1 |
| | 33 | ಬೆಳಗಾಂ (ವೃತ್ತಿಪರ) | ಪುರುಷ | 175 | 100 | 75 | 1 |
| ಉತ್ತರ ಕನ್ನಡ | 34 | ಕಾರವಾರ | ಪುರುಷ | 175 | 100 | 75 | 1 |
| ಚಿತ್ರದುರ್ಗ | 35 | ಹೊಳಲ್ಕೆರೆ | ಪುರುಷ | 240 | 120 | 120 | 1 |
| | 36 | ಚಿತ್ರದುರ್ಗ | ಮಹಿಳೆ | 250 | 125 | 125 | 1 |
| | 37 | ಚಳ್ಳಕೆರೆ | ಮಹಿಳೆ | 200 | 100 | 100 | 1 |
| ದಾವಣಗೆರೆ | 38 | ದಾವಣಗೆರೆ (ವೃತ್ತಿಪರ) | ಮಹಿಳೆ | 250 | 125 | 125 | 1 |
| | 39 | ಹರಿಹರ | ಮಹಿಳೆ | 200 | 100 | 100 | 1 |
| | 40 | ಹರಪನಹಳ್ಳಿ | ಮಹಿಳೆ | 175 | 100 | 75 | 1 |

**ಎಂ. ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ-2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು

**P.R. 346**

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಅಭಿವೃದ್ಧಿಪಡಿಸಿರುವ ಕೋಟೇಕರ್ ಬಡಾವಣೆಯಲ್ಲಿ ಬಹುಮಹಡಿ ಕಟ್ಟಡವನ್ನು ನಿರ್ಮಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರ ಕಛೇರಿಯ ಪತ್ರ ಸಂಖ್ಯೆ: ಕಗೃಮಂ/ಮುಅ/ ಬಹುಮಹಡಿ ಕಟ್ಟಡ/ಕೋಟೆಕರ್/840/2012-13, ದಿನಾಂಕ: 11-09-2012, 02/05-11-2012 ಮತ್ತು 30-11-2012/ 07-12-2012.

**ಪ್ರಸ್ತಾವನೆ:**

ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಮೇಲೆ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ, ಮಂಡಳಿಯು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಕೋಟೇಕರ್‌ನಲ್ಲಿ ಅಭಿವೃದ್ಧಿಪಡಿಸಿರುವ ಬಡಾವಣೆಯಲ್ಲಿ ಕಾಯ್ದಿರಿಸಿರುವ ನಿವೇಶನದಲ್ಲಿ ಮಂಡಳಿ ವತಿಯಿಂದ ಬಹುಮಹಡಿ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದ್ದು, ಸದರಿ ನಿವೇಶನವು 8720 ಚ. ಮೀ. ಅಂದರೆ ಸುಮಾರು 2.15 ಎಕರೆ ಇದ್ದು. ಆ ಜಾಗದಲ್ಲಿ 3-ಬಿಹೆಚ್‌ಕೆಯ 32 ಫ್ಲಾಟ್‌ಗಳು, 2-ಬಿಹೆಚ್‌ಕೆಯ 108 ಫ್ಲಾಟ್‌ಗಳು ಮತ್ತು 1-ಬಿಹೆಚ್‌ಕೆಯ 90 ಫ್ಲಾಟ್‌ಗಳು ಸೇರಿ ಒಟ್ಟು 216 ಫ್ಲಾಟ್‌ಗಳನ್ನು ನಿರ್ಮಿಸಲು ಉದ್ದೇಶಿಸಿದ್ದು, ಸದರಿ ಪ್ರದೇಶದಲ್ಲಿ ವಸತಿಗೆ ಬೇಡಿಕೆ ಇರುವುದು ತಿಳಿದುಬರುತ್ತದೆ. ಈಗಾಗಲೇ ನಡೆಸಿರುವ ಬೇಡಿಕೆ ಸಮೀಕ್ಷೆ ಪ್ರಕಾರ 153 ಅರ್ಜಿಗಳು ಸ್ವೀಕೃತವಾಗಿವೆ. ಸದರಿ ಕಟ್ಟಡ ನಿರ್ಮಾಣ ಮಾಡಲು ರೂ. 63.50 ಕೋಟಿಗಳ ವೆಚ್ಚವಾಗುತ್ತದೆ. ಸದರಿ ಕಟ್ಟಡದ ಒಟ್ಟು ವಿಸ್ತೀರ್ಣವು 2,41,182 ಚ.ಅಡಿಗಳಾಗಿರುತ್ತದೆ. ಸದರಿ ಕಟ್ಟಡದ ನಿರ್ಮಾಣದ ದರ ಹಾಗೂ ಮಾರಾಟದ ದರ ಎಲ್ಲಾ ವೆಚ್ಚ ಸೇರಿ ಪ್ರತಿ ಚದರ ಅಡಿಗೆ ರೂ. 2,635-00 ವೆಚ್ಚವಾಗುತ್ತದೆ. ಆ ಪ್ರದೇಶದಲ್ಲಿ ಚ. ಅಡಿಗೆ ಮಾರುಕಟ್ಟೆ ದರವು ರೂ. 3,200-00 ರಿಂದ ರೂ. 3,500-00 ಗಳವರಗೂ ಇರುತ್ತದೆ. ಮಂಡಳಿಯು ಜನಸಾಮಾನ್ಯರಿಗೆ ರೂ. 3000-00ದಂತೆ ಫ್ಲಾಟ್‌ಗಳನ್ನು ಮಾರಾಟ ಮಾಡಬಹುದಾಗಿದೆ. ಈ ಕಟ್ಟಡ ನಿರ್ಮಾಣದ ವೆಚ್ಚವನ್ನು ಮಂಡಳಿಯ ಆಂತರಿಕ ಸಂಪನ್ಮೂಲದಿಂದ ಬರುವ ಹಣದಿಂದ ಭರಿಸಲು ಉದ್ದೇಶಿಸಲಾಗಿದ್ದು ಕಾಮಗಾರಿ ಪ್ರಾರಂಭಿಸಿದ ನಂತರ ಪ್ರಕಟಣೆ ಹೊರಡಿಸಿ ಠೇವಣಿ ಸಂಗ್ರಹಣೆ ಪ್ರಾರಂಭಿಸಲು ಉದ್ದೇಶಿಸಿದೆ. ಈ ಪ್ರಸ್ತಾವನೆಯ ಬಗ್ಗೆ ದಿನಾಂಕ: 11-01-2012ರ 438ನೇ ಮಂಡಳಿ ಸಭೆಯ ವಿಷಯ ಸಂಖ್ಯೆ : 27ರಲ್ಲಿ ನಿರ್ಣಯ ಕೈಗೊಳ್ಳಲಾಗಿದೆ. ಈ ಯೋಜನೆಯಿಂದ ಮಂಡಳಿಗೆ ಯಾವುದೇ ಹೆಚ್ಚುವರಿ ಆರ್ಥಿಕ ಹೊರೆ ಉಂಟಾಗುವುದಿಲ್ಲ. ಆದುದರಿಂದ, ಯೋಜನಾ ಮೊತ್ತ ರೂ. 63.50 ಕೋಟಿಗಳ ಅಂದಾಜು ವೆಚ್ಚದಲ್ಲಿ ಯೋಜನೆಯನ್ನು ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಮಂಡಳಿಯ ಆಯುಕ್ತರು ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಈ ಕೆಳಕಂಡಂತೆ ಆದೇಶ ಹೊರಡಿಸಲು ನಿರ್ಣಯಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 305 ಕಗೃಮಂ 2012, ಬೆಂಗಳೂರು, ದಿನಾಂಕ: 16ನೇ ಜನವರಿ, 2013.**

ಮೇಲಿನ ಮಾಹಿತಿಯ ಹಿನ್ನೆಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನ ಕೋಟೇಕರ್‌ನಲ್ಲಿ ಕರ್ನಾಟಕ ಗೃಹ ಮಂಡಲಿಯು ಅಭಿವೃದ್ಧಿಪಡಿಸಿರುವ ಬಡಾವಣೆಯಲ್ಲಿ ಕಾಯ್ದಿರಿಸಿರುವ 8720 ಚ.ಮೀ. ಅಂದರೆ ಸುಮಾರು 2.15 ಎಕರೆ ನಿವೇಶನದಲ್ಲಿ, ಕರ್ನಾಟಕ ಗೃಹ ಮಂಡಳಿಯು ಸುಮಾರು ರೂ. 63.50 ಕೋಟಿಗಳ ಸ್ವಂತ ಸಂಪನ್ಮೂಲಗಳ ಅಂದಾಜು ವೆಚ್ಚದಲ್ಲಿ, 3–ಬಿಹೆಚ್‌ಕೆಯ 32 ಫ್ಲಾಟ್‌ಗಳೂ, 2–ಬಿಹೆಚ್‌ಕೆಯ 108 ಫ್ಲಾಟ್‌ಗಳು ಮತ್ತು 1–ಬಿಹೆಚ್‌ಕೆಯ 90 ಫ್ಲಾಟ್‌ಗಳು ಸೇರಿ ಒಟ್ಟು 216 ಫ್ಲಾಟ್‌ಗಳ 2,41,182–00 ಚ.ಅಡಿಗಳ ಬಹುಮಹಡಿ ಕಟ್ಟಡವನ್ನು ನಿರ್ಮಿಸಲು ದಿನಾಂಕ : 11–01–2012ರ 438ನೆ ಮಂಡಳಿ ಸಭೆಯ ವಿಷಯ ಸಂಖ್ಯೆ : 27ರಲ್ಲಿ ಕೈಗೊಂಡಿರುವ ನಿರ್ಣಯಕ್ಕೆ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಎಸ್. ಶಿವಕುಮಾರಸ್ವಾಮಿ,**
ಪೀಠಾಧಿಕಾರಿ–3,
ವಸತಿ ಇಲಾಖೆ

**P.R. 348**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕನಕಪುರ ವನ್ಯಜೀವಿ ವಲಯದ ವ್ಯಾಪ್ತಿಯ ಬೋರೇಗೌಡನ ದೊಡ್ಡಿಯಿಂದ ಭೂವಳ್ಳಿವರೆಗೆ ರಾತ್ರಿ ಸಮಯದಲ್ಲಿ ರಸ್ತೆಯ ಸಂಚಾರವನ್ನು ನಿರ್ಬಂಧಿಸಿ ಭೂವಳ್ಳಿ ಮುಖ್ಯ ರಸ್ತೆಯಲ್ಲಿ ತಾತ್ಕಾಲಿಕ ಅರಣ್ಯ ಠಾಣೆಯನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು ಇವರ ಪತ್ರ ಸಂಖ್ಯೆ: ಡಿ/ಡಬ್ಲ್ಯೂಎಲ್/ಸಿಆರ್–24/12–13, ದಿನಾಂಕ : 03–10–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ : 03–10–2012ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರು ಕನಕಪುರ ವನ್ಯಜೀವಿ ವಲಯದ ವ್ಯಾಪ್ತಿಯ ಬೋರೇಗೌಡನ ದೊಡ್ಡಿಯಿಂದ ಭೂವಳ್ಳಿವರೆಗೆ ಇರುವ ರಸ್ತೆ ಪ್ರದೇಶದಲ್ಲಿ ವನ್ಯಪ್ರಾಣಿಗಳು ರಸ್ತೆಯನ್ನು ದಾಟಿ ಕಾವೇರಿ ನದಿಯಲ್ಲಿ ನೀರು ಕುಡಿಯಲು ಹೋಗುವ ಅನಿವಾರ್ಯತೆ ಇದ್ದು, ಸದರಿ ರಸ್ತೆಯಲ್ಲಿ ರಾತ್ರಿ ವೇಳೆ ವಾಹನಗಳು ಹಾಗೂ ಜನರು ಸಂಚಾರ ಮಾಡುವುದರಿಂದ ವನ್ಯಪ್ರಾಣಿಗಳು ವಾಹನಗಳಿಗೆ ಸಿಲುಕಿ ಅಪಘಾತಕ್ಕೊಳಗಾಗುವುದನ್ನು ತಪ್ಪಿಸಲು ಮತ್ತು ಕಾವೇರಿ ವನ್ಯಧಾಮದ ವ್ಯಾಪ್ತಿಯಲ್ಲಿರುವ ಅಮೂಲ್ಯ ವನ್ಯಪ್ರಾಣಿಗಳು ಹಾಗೂ ಕಾವೇರಿ ನದಿ ಪಾತ್ರದಲ್ಲಿರುವ ಅಪೂರ್ವ ಜಲಚರಗಳನ್ನು ಸಂರಕ್ಷಿಸುವ ದೃಷ್ಟಿಯಿಂದ ಬೋರೇಗೌಡನ ದೊಡ್ಡಿಯಿಂದ ಭೂವಳ್ಳಿವರೆಗೆ ಒಟ್ಟು 29 ಕಿ.ಮೀ. ರಸ್ತೆಯಲ್ಲಿ ರಸ್ತೆಯ ಸಂಚಾರವನ್ನು ರಾತ್ರಿ 9.00 ಗಂಟೆಯಿಂದ ಬೆಳಿಗ್ಗೆ 6 ಗಂಟೆಯವರೆಗೆ ನಿರ್ಬಂಧಿಸಿ ಭೂವಳ್ಳಿ ಮುಖ್ಯ ರಸ್ತೆಯಲ್ಲಿ ತಾತ್ಕಾಲಿಕ ಅರಣ್ಯ ತನಿಖಾ ಠಾಣೆಯನ್ನು ಸ್ಥಾಪಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 337 ಎಫ್‌ಡಬ್ಲ್ಯೂಎಲ್ 2012, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸುವ ಹಿನ್ನೆಲೆಯಲ್ಲಿ ಕನಕಪುರ ವನ್ಯಜೀವಿ ವಲಯದ ವ್ಯಾಪ್ತಿಯ ಬೋರೇಗೌಡನ ದೊಡ್ಡಿಯಿಂದ ಭೂವಳ್ಳಿವರೆಗೆ ಒಟ್ಟು 29 ಕಿ.ಮೀ. ರಸ್ತೆಯಲ್ಲಿ ರಸ್ತೆಯ ಸಂಚಾರವನ್ನು ರಾತ್ರಿ 9.00 ಗಂಟೆಯಿಂದ ಬೆಳಿಗ್ಗೆ 6 ಗಂಟೆಯವರೆಗೆ ನಿರ್ಬಂಧಿಸಲು ಮತ್ತು ಭೂವಳ್ಳಿ ಮುಖ್ಯ ರಸ್ತೆಯಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 33(a) ಹಾಗೂ ಕರ್ನಾಟಕ ಅರಣ್ಯ ಕಾಯ್ದೆ, 1963 ಸೆಕ್ಷನ್ 50 (ಎಫ್)ರ ಪ್ರಕಾರ ತಾತ್ಕಾಲಿಕ ಅರಣ್ಯ ತನಿಖಾ ಠಾಣೆಯನ್ನು ಸ್ಥಾಪಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಪಿ. ಪಾಟೀಲ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**P.R. 349**
**SC - 20**

## ಇಂಧನ ಸಚಿವಾಲಯ

**ವಿಷಯ :** 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನದ ಬಾಕಿ ಮೊತ್ತವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004 ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008 ದಿನಾಂಕ : 04–09–2008.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 14 ಪಿಎಸ್‌ಆರ್ 2012 ದಿನಾಂಕ : 23–04–2012, 09–05–2012, 05–06–2012, 25–06–2012, 03–07–2012, 23–07–2012, 06–08–2012, 31–08–2012, 06–09–2012, 04–10–2012, 08–10–2012, 02–11–2012, 15–11–2012, 14–12–2012 11–01–2013, 23–02–2013 ಮತ್ತು 01–03–2013.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ : 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 4550–00 ಕೋಟಿಗಳನ್ನು ಮತ್ತು ಪೂರಕ ಅಂದಾಜು–2ರಲ್ಲಿ ರೂ. 1250 ಕೋಟಿಗಳನ್ನು ಒದಗಿಸಲಾಗಿದೆ.

4. ವಿದ್ಯುತ್ ಸರಬರಾಜು ಕಂಪನಿಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ. 4722–04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ

5. ಸರ್ಕಾರವು 2012–13ನೇ ಸಾಲಿನ ಮಾರ್ಚ್–2013ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಾಕಿ ಬಾಬ್ತಿಗೆ ರೂ. 250.00 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 14 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 07ನೇ ಮಾರ್ಚ್, 2013.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡಿರುವುದಕ್ಕಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ನಿಗದಿ ಪಡಿಸಿರುವ ಬಾಕಿ ಸಹಾಯಧನದ ಬಾಬ್ತು ರೂ. 250.00 ಕೋಟಿಗಳ (ರೂ. ಇನ್ನೂರ ಐವನ್ನು ಕೋಟಿಗಳು ಮಾತ್ರ) ಸಹಾಯಧನವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|
| 1 | 2 | 3 | 4 |
| ಹುವಿಕಂ | 170.00 | 100.00 | 70.00 |
| ಗುವಿಕಂ | 80.00 | 50.00 | 30.00 |
| **ಒಟ್ಟು** | **250.00** | **150.00** | **100.00** |

2. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

3. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಪಾವತಿ ಮಾಡಬೇಕಾದ ವಿದ್ಯುತ್ ಖರೀದಿ ವೆಚ್ಚದ ಬಾಕಿ ಬಾಬ್ತಿಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಕೋರಿಕೆಯಂತೆ ಮೇಲಿನ ಕೋಷ್ಟಕದಲ್ಲಿರುವಂತೆ ನೇರವಾಗಿ ಬಿಡುಗಡೆ ಮಾಡಿದೆ.

4. ವಿದ್ಯುತ್ ಸರಬರಾಜು ಕಂಪನಿಗಳು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಸಹಾಯಧನವನ್ನು 10 ಹೆಚ್‌ಪಿವರೆಗಿನ ನೀರಾವರಿ ವಿದ್ಯುತ್ ಸ್ಥಾವರಗಳ ಬಾಬ್ತಿಗೆ ಲೆಕ್ಕೀಕರಿಸಲು ಆದೇಶಿಸಿದೆ.

5. ವಿದ್ಯುತ್ ಸರಬರಾಜು ಕಂಪನಿಗಳು ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 150.00 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate), ಸಲ್ಲಿಸತಕ್ಕದ್ದು.

7. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ತಮ್ಮ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

8. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

9. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆ.ಇ. 237 ವೆಚ್ಚ–1/2013 ದಿನಾಂಕ : 06–03–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 358**

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕದಲ್ಲಿ ಬೆಳಕು ಯೋಜನೆಯನ್ನು ಅನುಷ್ಠಾನಗೊಳಿಸಲು ಸಹಾಯಧನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 20 ಪಿಎಸ್‌ಆರ್ 2012 ದಿನಾಂಕ : 30–01–2013.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಆಭಿವೃದ್ಧಿ ನಿಯಮಿತದ ಪತ್ರ ಸಂಖ್ಯೆ : ಕ್ರೆಡೆಲ್/07/ಬೆಳಕು ಯೋಜನಾ/2012/299, ದಿನಾಂಕ : 06–02–2013

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಸರ್ಕಾರವು ಬಡತನದ ರೇಖೆಗಳಿಗಿಂತ ಕೆಳಗಿರುವ ಸಾಮ್ಯಾನ್ಯ ವರ್ಗದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ಎರಡು (2) ಸಿಎಫ್‌ಎಲ್ ಲ್ಯಾಂಪ್‌ಗಳನ್ನು 10–50 ಲಕ್ಷ ಫಲಾನುಭವಿಗಳಿಗೆ 2012–13ನೇ ಸಾಲಿನಲ್ಲಿ ನೀಡಲು ಬೆಳಕು ಯೋಜನೆಗೆ ಅನುಮೋದನೆ ನೀಡಿದೆ.
2. ಬೆಳಕು ಯೋಜನೆಯ ಸಿಎಫ್‌ಎಲ್ ಲ್ಯಾಂಪ್‌ಗಳನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲು ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆ. ತಮ್ಮ ಪತ್ರ ಸಂಖ್ಯೆ ಅನಾಸ 48 ಅನಾಸ 2012 ದಿನಾಂಕ : 21–12–2012ರಲ್ಲಿ ಸಹಮತಿಯನ್ನು ನೀಡಿರುತ್ತದೆ.
3. ಅದರಂತೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರು ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಗೆ ಒದಗಿಸಲಾದ ಅನುದಾನ ಬಿಡುಗಡೆ ಕೋರಿ ಸಲ್ಲಿಸಿದ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 20 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 07ನೇ ಮಾರ್ಚ್, 2013.**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬೆಳಕು ಯೋನೆಯಡಿ 2 CFL ಲ್ಯಾಂಪುಗಳನ್ನು ಬಡತನ ರೇಖೆಗಿಂತ ಕೆಳಗಿರುವ ಸಾಮಾನ್ಯ ವರ್ಗದ/ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಆಹಾರ ಮತ್ತು ನಾಗರೀಕ ಸರಬರಾಜು ಮತ್ತು ಗ್ರಾಹಕ ಇಲಾಖೆಯ ನ್ಯಾಯ ಬೆಲೆ ಅಂಗಡಿಗಳ ಮೂಲಕ ಅನುಷ್ಠಾನಕ್ಕಾಗಿ 2012–13ನೇ ಸಾಲಿಗೆ ರೂ. 5.00 ಕೋಟಿಗಳನ್ನು (ರೂ. ಐದು ಕೋಟಿಗಳನ್ನು) ಬಿಡುಗಡೆ ಮಾಡಿ ಆದೇಶಿಸಿದೆ.
2. ಈ ಮೊತ್ತವನ್ನು ಲೆಕ್ಕಶೀರ್ಷಿಕೆ **"**4801–80–190–0–03–132**"** ಬೆಳಕು ಯೋಜನೆಯಡಿ ಭರಿಸತಕ್ಕದ್ದು.
3. ಕರ್ನಾಟಕ ನವೀಕರಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 211 Exp-1/12 ದಿನಾಂಕ : 04–03–2013ರ ಸಹಮತಿಯನ್ವಯ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 359**

## COMMERCE & INDUSTRIES SECRETARIAT

**Sub :** Sanction of VAT loan under 2009-14 policy to M/s. Nectar Beverages Pvt. Ltd., Dharwad, Dharwad Taluk & District – reg.

**Read :** (1) SLSWCC Clearance No. KUM/SLSWCC 51/E7/888/2009-10, dated : 29-08-2009.

(2) Letter from Commissioner, Industrial Development and Director of Industries and Commerce, Bangalore No. ಕೈವಾಇ/ಕೈವಿ/ಇ2/ಜೆ.ಕೆ.ಸಿ/4ನೇಕಂತುವ್ಯಾಲೋ/33/2012-13, dated : 18-01-2012

**Preamble :**

The project proposal of M/s. Nectar Beverages Pvt. Ltd., Dharwad to increase the capacity to manufacture beverages by installing an additional bottle washer with capacity 300 BPM and ETP and New Aquafina Packages Water Plant in their existing premises and to install I MW Wind Turbine Generator at Chikkodi Wind Park, with an investment of Rs. 21.31 crores was considered by the State Level Single Window Clearance Committee in its 51st meeting held on 31-07-2009 and the same was approved the read (1) above.

The Commissioner for Industrial Development and Director of Industries & Commerce has proposed vide his letter read at (2) above, to sanction of loan of Rs. 4, 71,76,287/- which is 25% of the gross VAT paid by the unit from 01-04-2011 to 31-03-2012. Further, he has stated that the unit has eligibility to avail loan on Vat under Industrial Policy 2009-14.

The proposal of the Commissioner for Industrial Development and Director of Industries & Commerce has been examined in detail.

Hence the following order.

**GOVERNMENT ORDER No. CI 62 SPI 2013, BANGALORE, DATED 08th MARCH, 2013**

In the circumstances as explained in the preamble, Govt. is pleased to accord approval for the release of Rs. 4,71,76,287/- (Rupees four crore seventy-one lakh seventy-six thousand two hundred and eight-seven only) as the interest free loan against VAT to **M/s. Nectar Beverages Pvt., Ltd., Dharwad (Period covered 01-04-2011 to 31-03-2012), under Head of Account "6852-02-800-0-01-394 Loans (Plan) during 2012-13"**

M/s. Nectar Beverages Pvt. Ltd., Dharwad, is authorized to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with the concurrence of Finance Department vide Note. No. FD 122 Exp-1/13, dated : 04-03-2013

By Order and in the Name of the Governor of Karnataka
**SHIVASHANKAR NAIK L.**
Desk Officer (Technical Cell),
Commerce & Industries Department.

**P.R. 360**

## COMMERCE & INDUSTRIES SECRETARIAT

**Sub :** Sanction of VAT loan under 2009-14 policy to M/s. J. K. Cement Works, Muddapur, Bagalkot District – reg.

**Read :**
1. Govt. Order No. CI 53 SPI 2010, dated : 21-10-2010.
2. Govt. Order No. CI 53 SPI 2010, dated : 13-02-2012.
3. Govt. Order No. CI 53 SPI 2010, dated : 09-08-2012.
4. Letter from Commissioner, Industrial Development, and Director of Industries and Commerce, No. ಕೈವಾಇ/ಕೈವಿ/ಇ2/ಜೆ.ಕೆ.ಸಿ/4ನೇಕಂತುವ್ಯಾಲೋ/33/2012-13, dated : 18-01-2012

**Preamble :**

Government had approved the establishment of a 2 Million MTPA Cement Plant by M/s. J. K. Cement Ltd., at Muddapur (Metagud) Village, Mudhol Taluk, Bagalkot District, with an investment of Rs. 300 cores.

M/s. J. K. Cement Ltd., revised their investment proposal to enhance their plant capacity from 2 MMTPA to 2.5 MMTPA with 25 MW Power Plant and submitted it for Government approval, SHLCC in its meeting held on 28-08-2006 approved the revised investment plan and Govt. Order has been issued.

Subsequently, M/s. J. K. Cement Ltd. revised the above proposal to enhance the plant capacity to 3 MMTPA with change in the name of the Company as M/s. J. K. Cement Works. The proposal was discussed and approved in the 20th SHLCC meeting held on 05-01-2010. Accordingly, Govt. Order has been issued.

Though, the investment proposal of M/s. J. K. Cement Works was approved earlier to 2009, substantial investment took place after 01-04-2009 and the commercial production stated in October 2009. M/s. J. K. Cement Works requested the Government to sanction incentives and concessions as per Industrial Policy 2009-14. The subject was examined in the Government and a Govt. Order read at (1) above was issued extending the incentives and concessions to M/s. J. K. Cement Works. Muddapur, Bagalkot District, as per 2009-14 Industrial Policy.

In the Govt. Orders read at (2) and (3) above, Govt. accorded approval for the release of Total Rs. 16,77,07,000/- as the 2nd 3rd (Rs. 10,76,21,000/- and 4th installment (Rs. 6,00,86,000/-) of interest free loan against VAT (period covered 01-10-2011 to 31-03-2012) to M/s. J. K. Cement Works, Muddapur, Bagalkot District, under Head of Account "6852-02-800-0-01-394 Loans (Plan) during 2012-13",

The Commissioner for Industrial Development and Director of Industries & Commerce has proposed vide his letter read at (4) above, to sanction 5th installment of loan of Rs. 7,87,16,858/- which is 25% of the gross VAT paid by the unit from 01-04-2012 to 30-09-2012. Further, he has stated that the unit has got eligibility to avail loan on VAT under Industrial Policy 2009-14.

The proposal of the Commissioner for Industrial Development and Director of Industries & Commerce has been examined in detail.

Hence the following order.

**GOVERNMENT ORDER No. CI 53 SPI 2010, BANGALORE, DATED 08th MARCH, 2013**

In the circumstances as explained in the preamble, Govt. is pleased to accord approval for the release of Rs. 7,87,16,858/- (Rupees seven crore eighty-seven lakh sixteen thousand eight hundred and fifty-eight only) as the 5th Installment of interest free loan against VAT (period covered 01-04-2012 to 30-09-2012) to M/s. J. K. Cement Works, Muddapur, Bagalkot District under Head of Account "6852-02-800-0-01-394 Loans (Plan) during 2012-13".

M/s. J. K. Cement Works, Muddapur, Bagalkot District is authorized to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with the concurrence of Finance Department vide Note No. FD 122 Exp-1/13, dated : 04-03-2013.

By Order and in the Name of the Governor of Karnataka
**SHIVASHANKAR NAIK L.**
Desk Officer (Technical Cell),
Commerce & Industries Department.

**P.R. 361**

## ಒಳಾಡಳಿತ ಸಚಿವಾಲಯ

**ವಿಷಯ :** ಗೌರವಾನ್ವಿತ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಹಾಗೂ ಸಿಬ್ಬಂದಿಗಳಿಗೆ ಸಂಭಾವನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 100 ಎಸ್‌ಎಸ್‌ಟಿ 1991, ದಿನಾಂಕ : 18-2-1991.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 510 ಎಸ್‌ಎಸ್‌ಟಿ 1994, ದಿನಾಂಕ : 10-9-2006
3. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 416 ಎಸ್‌ಎಸ್‌ಟಿ 1998, 8-12-1998.

**ಪ್ರಸ್ತಾವನೆ :**

ಕರ್ನಾಟಕ ಅಕ್ರಮ ಭಟ್ಟಿಸಾರಾಯಿ, ಮಾದಕವಸ್ತು ಅಪರಾಧಗಳು, ಜೂಜುಕೋರರು, ಗೂಂಡಗಳ ಅನೈತಿಕ ವ್ಯವಹಾರ ಅಪರಾಧಗಳು ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರು, ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ 1985ರ ಗೂಂಡಾ ಕಾಯ್ದೆಯ 9(1)ರನ್ವಯ ರಚಿತವಾಗಿರುವ ಸಲಹಾ ಸಮಿತಿಯ ಗೌರವಾನ್ವಿತ ನ್ಯಾಯಾಧೀಶರು ಹಾಗೂ ಅವರ ಸಿಬ್ಬಂದಿಗಳಿಗೆ ಸಂಭಾವನೆಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೆಚ್ಚಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೌರವಾನ್ವಿತ ನ್ಯಾಯಾಧೀಶರಿಗೆ ನಿಗದಿಪಡಿಸಿದ ಸಂಭಾವನೆಯನ್ನು ರದ್ದುಪಡಿಸಿ ಆದೇಶ ಹೊರಡಿಸಲಾಗಿದೆ. ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸಲಹಾ ಸಮಿತಿಯ ಗೌರವಾನ್ವಿತ ನ್ಯಾಯಾಧೀಶರು ಹಾಗೂ ಇನ್ನಿತರೇ ಸಿಬ್ಬಂದಿ ವರ್ಗದವರಿಗೆ ಸಂಭಾವನೆಯನ್ನು ಮರು ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಬೆಲೆ ಏರಿಕೆಯನ್ನು ಗಮನದಲ್ಲಿರಿಸಿ ಕರ್ನಾಟಕ ಅಕ್ರಮ ಭಟ್ಟಿಸಾರಾಯಿ, ಮಾದಕವಸ್ತು ಅಪರಾಧಗಳು, ಜೂಜುಕೋರರು, ಗೂಂಡಗಳ ಅನೈತಿಕ ವ್ಯವಹಾರ ಅಪರಾಧಗಳು ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರು, ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ 1985ರ ಗೂಂಡಾ ಕಾಯ್ದೆಯಡಿ ರಚಿಸಲಾದ ಗೌರವಾನ್ವಿತ ನ್ಯಾಯಾಧೀಶರು ಹಾಗೂ ಇನ್ನಿತರೆ ಸಿಬ್ಬಂದಿಗಳ ಸಂಭಾವನೆಯನ್ನು ಪುನರ್ ನಿಗದಿಪಡಿಸುವುದು ಸೂಕ್ತವೆಂದು ಸರ್ಕಾರವು ಮನಗಂಡಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 05 ಎಸ್‌ಎಸ್‌ಟಿ 2013, ಬೆಂಗಳೂರು, ದಿನಾಂಕ : 8-3-2013.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಅಕ್ರಮ ಭಟ್ಟಿಸಾರಾಯಿ, ಮಾದಕವಸ್ತು ಅಪರಾಧಗಳು, ಜೂಜುಕೋರರು, ಗೂಂಡಗಳ ಅನೈತಿಕ ವ್ಯವಹಾರ ಅಪರಾಧಗಳು ಮತ್ತು ಕೊಳಚೆ ಪ್ರದೇಶಗಳನ್ನು ಕಬಳಿಸುವವರು, ಅಪಾಯಕಾರಿ ಚಟುವಟಿಕೆಗಳ ಪ್ರತಿಬಂಧಕ ಅಧಿನಿಯಮ 1985ರಡಿಯಲ್ಲಿ ರಚಿಸಲಾಗಿರುವ ಸಲಹಾ ಮಂಡಳಿಯ ಗೌರವಾನ್ವಿತ ನ್ಯಾಯಾಧೀಶರು ಹಾಗೂ ಇನ್ನಿತರೆ ಸಿಬ್ಬಂದಿಗಳ ಸಂಭಾವನೆಯನ್ನು ಈ ಕೆಳಗಿನಂತೆ ನಿಗದಿಪಡಿಸಲು ಸರ್ಕಾರವು ಹರ್ಷಿಸುತ್ತದೆ.

| | | |
|---|---|---|
| 1. ಗೌರವಾನ್ವಿತ ಅಧ್ಯಕ್ಷರು ಮತ್ತು ಸದಸ್ಯರು, ಸಲಹಾಮಂಡಳಿ | – | ರೂ. 2,500-00 (ಪ್ರತಿ ಪ್ರಕರಣಕ್ಕೆ) |
| 2. ಅಧ್ಯಕ್ಷರು ಮತ್ತು ಸದಸ್ಯರುಗಳ ಆಪ್ತ ಕಾರ್ಯದರ್ಶಿಗಳು | – | ರೂ. 0250-00 (ಪ್ರತಿ ಪ್ರಕರಣಕ್ಕೆ) |
| 3. ಅಧ್ಯಕ್ಷರು ಮತ್ತು ಸದಸ್ಯರುಗಳ ಜಮೇದಾರ್ | – | ರೂ. 0150-00 (ಪ್ರತಿ ಪ್ರಕರಣಕ್ಕೆ) |
| 4. ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ) ಇಲ್ಲಿ ಕರ್ತವ್ಯ ನಿರ್ವಹಿಸುವ ಗ್ರೂಪ್-ಡಿ ನೌಕರರು | – | ರೂ. 0150-00 (ಪ್ರತಿ ಪ್ರಕರಣಕ್ಕೆ) |

2. ಈ ಆದೇಶವು ತಕ್ಷಣದಿಂದ ಜಾರಿಗೆ ಬರತಕ್ಕದ್ದು.

3. ಈ ವೆಚ್ಚ ಲೆಕ್ಕಶೀರ್ಷಿಕೆ "2052-Secretariat-General Services-090-Secretariat-I-09-Expenditure connected with Committees, Conferences and Tribunals etc., (Non-Plan)" ರ ಅಡಿಯಲ್ಲಿ ಭರಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಆಇ/16/ವೆಚ್ಚ–11/2013, ದಿನಾಂಕ : 2–2–2013ರಲ್ಲಿ ನೀಡಿರುವ ಸಹಮತಿಯ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ, ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

P.R. 362

## ಕಂದಾಯ ಸಚಿವಾಲಯ

**ವಿಷಯ :** ಭದ್ರಾ ಮೇಲ್ದಂಡೆ ಯೋಜನೆಗಾಗಿ ಅರಣ್ಯ ಇಲಾಖೆಯ ಜಮೀನನ್ನು ಬಳಕೆ ಮಾಡುವುದರಿಂದ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ಸ.ನಂ. 343 ರಲ್ಲಿ 364–00 ಹೆಕ್ಟೇರ್ (901–00 ಎಕರೆ) ಜಮೀನನ್ನು ಪರ್ಯಾಯ ಅರಣ್ಯೀಕರಣಕ್ಕಾಗಿ ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ, ಸಿಆರ್. 71/2009–10, ದಿನಾಂಕ : 17–1–2012.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ: ಜಸಂಇ 73 ವಿಬ್ಯಾಇ 2012, ದಿನಾಂಕ : 30–10–2012.
3. ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ : 26144–47/2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಚಿತ್ರದುರ್ಗ ಇವರು ಭದ್ರಾ ಮೇಲ್ದಂಡೆ ಯೋಜನೆಯ ಪ್ಯಾಕೇಜ್–1ರ ನಾಲೆ ಪಂಕ್ತಿಕರಣವು ಚಿಕ್ಕಮಗಳೂರು ಜಿಲ್ಲೆ, ಎನ್.ಆರ್.ಪುರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಆರಂಬಳ್ಳಿ ಅರಣ್ಯ ಪ್ರದೇಶದಲ್ಲಿ ಹಾದುಹೋಗುತ್ತಿರುವುದಾಗಿಯೂ, ಪ್ಯಾಕೇಜ್–2ರ ನಾಲೆ ಪಂಕ್ತಿಕರಣವು ಚಿಕ್ಕಮಗಳೂರು ಜಿಲ್ಲೆ ತರೀಕೆರೆ ವ್ಯಾಪ್ತಿಯಲ್ಲಿ ಬರುವ ಕುಂದೂರು ಅರಣ್ಯ ಪ್ರದೇಶ ಮತ್ತು ಗುರುಪುರ ಅರಣ್ಯ ಪ್ರದೇಶದಲ್ಲಿ ಹಾದುಹೋಗುತ್ತಿರುವುದಾಗಿಯೂ, ಹಾಗೂ ಚಿತ್ರದುರ್ಗ ಉಪ ಕಾಲುವೆಯು ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು, ದೇವರಗುಡ್ಡ, ಜಾನಕಲ್ ಮತ್ತು ಲಕ್ಕಿಹಳ್ಳಿ ಅರಣ್ಯ ಪ್ರದೇಶದಲ್ಲಿ ಹಾದುಹೋಗುತ್ತಿರುವುದಾಗಿಯೂ, ಈ ಪಂಕ್ತಿಕರಣದನ್ವಯ ಕಾಲುವೆ ನಿರ್ಮಾಣಕ್ಕೆ ಮೇಲಿನ ಅರಣ್ಯ ಪ್ರದೇಶದ ಒಟ್ಟು 364.50 ಹೆಕ್ಟೇರ್ ಪ್ರದೇಶ ಭೂ ಸ್ವಾಧೀನಪಡಿಸಿಕೊಳ್ಳುವ ಅವಶ್ಯಕತೆ ಇದ್ದು, ಅರಣ್ಯ ಸಂರಕ್ಷಣಾ ಕಾಯ್ದೆ, 1920ರನ್ವಯ ಸಮಾನಾಂತರ (ಅಷ್ಟೇ ಪ್ರಮಾಣದ) ಕಂದಾಯ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸಬೇಕಾಗಿರುವುದರಿಂದ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ಸರ್ವೆ ನಂ. 343 ರಲ್ಲಿ 364–00 ಹೆಕ್ಟೇರ್ (901–00 ಎಕರೆ) ಜಮೀನನ್ನು ಅರಣ್ಯೀಕರಣಕ್ಕಾಗಿ ಅರಣ್ಯ ಇಲಾಖೆಗೆ ವರ್ಗಾಯಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯಂತೆ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ಸರ್ವೆ ನಂ. 343ರಲ್ಲಿ ಒಟ್ಟು 6973–13 ಎಕರೆ ಜಮೀನಿದ್ದು. ಇದರಲ್ಲಿ 1200–00 ಎಕರೆ ಸಿ ಮತ್ತು ಡಿ ವರ್ಗಕ್ಕೆ ಸೇರಿರುತ್ತದೆ. 100–00 ಎಕರೆ ಪ್ರದೇಶದಲ್ಲಿ ಅರಣ್ಯ ಇಲಾಖೆಯವರು ನೀಲಗಿರಿ ಮತ್ತು ಕಾಡು ಗಿಡಗಳನ್ನು ಬೆಳೆಸಿರುತ್ತಾರೆ. 4937–30 ಎಕರೆ ಜಮೀನು ಈಗಾಗಲೇ ಮಂಜೂರಾಗಿರುತ್ತದೆ. ಉಳಿದಂತೆ 2900–06 ಎಕರೆ ಭೂಮಿ ಲಭ್ಯವಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅ.ಸ.ಪತ್ರದಲ್ಲಿ ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರು ಭದ್ರಾ ಮೇಲ್ದಂಡೆ ಯೋಜನೆಯು ಬರದ ದವಡೆಗೆ ಸಿಲುಕಿರುವ ಜಿಲ್ಲೆಗಳಿಗೆ ನೀರನ್ನು ಒದಗಿಸುವ ಯೋಜನೆಯಾಗಿದ್ದು, ನೀರಾವರಿ ಯೋಜನೆಯನ್ನು ನಿಗಧಿತ ಅವಧಿಯಲ್ಲಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಹಾಗೂ ಈ ಯೋಜನೆಗೆ ಕೇಂದ್ರ ಸರ್ಕಾರದಿಂದ ತೀರುವಳಿ ಪಡೆಯಲು ಸರ್ಕಾರದ ಆದೇಶವು ಅವಶ್ಯವಿರುವುದರಿಂದ ಸರ್ಕಾರದ ಭೂಮಿಯನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 31 ಎಲ್‌ಜಿಸಿ 2012, ಬೆಂಗಳೂರು, ದಿನಾಂಕ : 26–2–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 27ನ್ನು ಚಲಾಯಿಸಿ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಭದ್ರಾ ಮೇಲ್ದಂಡೆ ಯೋಜನೆಗಾಗಿ ಅರಣ್ಯ ಇಲಾಖೆಯ ಜಮೀನನ್ನು ಉಪಯೋಗಿಸಿಕೊಳ್ಳುತ್ತಿರುವುದರಿಂದ ಪರ್ಯಾಯವಾಗಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ರಿ.ಸ. ನಂ. 343ರಲ್ಲಿ 364–50 ಹೆಕ್ಟೇರ್ (901–00 ಎಕರೆ) ಭೂಮಿಯನ್ನು ಅರಣ್ಯೀಕರಣ ಉದ್ದೇಶಕ್ಕಾಗಿ ಅರಣ್ಯ ಇಲಾಖೆಗೆ ವರ್ಗಾಯಿಸಲು ರಿಟ್ ಅರ್ಜಿ ಸಂಖ್ಯೆ : 26144–47/2012 ರಲ್ಲಿನ ಅಂತಿಮ ತೀರ್ಪಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

P.R. 366
SC-100

## ಕಂದಾಯ ಸಚಿವಾಲಯ

**ವಿಷಯ :** ತೋಟಗಾರಿಕೆ ಇಲಾಖೆಯು ತೆಂಗು ಬೀಜೋತ್ಪಾದನಾ ಘಟಕವನ್ನು ಕರ್ನಾಟಕ ರಾಜ್ಯ ತೋಟಗಾರಿಕಾ ಅಭಿವೃದ್ಧಿ ಏಜೆನ್ಸಿ (KSHDA) ಮೂಲಕ ಸ್ಥಾಪಿಸಲು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ರಾವುತನಹಳ್ಳಿ ಗ್ರಾಮದ ಸರ್ವೆ ನಂ. 78 ರಲ್ಲಿ 5–00 ಎಕರೆ ಜಮೀನನ್ನು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ತೋಟಗಾರಿಕೆ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ತೋಇ 85 ಪ್ರಕಾ 2013, ದಿನಾಂಕ : 26–2–2013.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ತೋಟಗಾರಿಕೆ ಇಲಾಖೆಯು ತೆಂಗು ಬೀಜೋತ್ಪಾದನಾ ಘಟಕವನ್ನು ಕರ್ನಾಟಕ ರಾಜ್ಯ ತೋಟಗಾರಿಕಾ ಅಭಿವೃದ್ಧಿ ಏಜೆನ್ಸಿ (KSHDA) ಮೂಲಕ ಸ್ಥಾಪಿಸಲು ಉದ್ದೇಶಿಸಿದ್ದು, ಸದರಿ ಬೀಜೋತ್ಪಾದನಾ ಘಟಕದ ಸ್ಥಾಪನೆಗೆ ಬೆಂಗಳೂರು ಉತ್ತರ ತಾಲ್ಲೂಕು, ನೆಲಮಂಗಲ ಹೋಬಳಿ, ದಾಸನಪುರದಲ್ಲಿರುವ 5–00 ಎಕರೆ ಸರ್ಕಾರಿ ಜಮೀನನ್ನು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ತೋಟಗಾರಿಕೆ ಇಲಾಖೆ ಇವರು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ರಾವುತನಹಳ್ಳಿ ಗ್ರಾಮದ ಸರ್ವೆ ನಂ. 78 ರಲ್ಲಿ 5–00 ಎಕರೆ ಜಮೀನಿದ್ದು, ಇದನ್ನು ತೋಟಗಾರಿಕೆ ಇಲಾಖೆಯ ತೆಂಗು ಬೀಜೋತ್ಪನ್ನ ಘಟಕವನ್ನು ಕರ್ನಾಟಕ ರಾಜ್ಯ ತೋಟಗಾರಿಕಾ ಅಭಿವೃದ್ಧಿ ಏಜೆನ್ಸಿ (KSHDA) ಸ್ಥಾಪಿಸಲು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 138 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ : 4–3–2013.**

ತೋಟಗಾರಿಕೆ ಇಲಾಖೆಯ ತೆಂಗು ಬೀಜೋತ್ಪನ್ನ ಘಟಕವನ್ನು ಕರ್ನಾಟಕ ರಾಜ್ಯ ತೋಟಗಾರಿಕಾ ಅಭಿವೃದ್ಧಿ ಏಜೆನ್ಸಿ (KSHDA) ಸ್ಥಾಪಿಸಲು ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ರಾವುತನಹಳ್ಳಿ ಗ್ರಾಮದ ಸರ್ವೆ ನಂ. 78 ರಲ್ಲಿ 5–00 ಎಕರೆ ಸರ್ಕಾರಿ ಜಮೀನನ್ನು ತೋಟಗಾರಿಕೆ ಇಲಾಖೆಗೆ ಉಚಿತವಾಗಿ ಹಸ್ತಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–1).

P.R. 367
SC-50

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರಾಜ್ಯದ ನಗರ ಹಾಗೂ ಪಟ್ಟಣಗಳಿಂದ ಉತ್ಪತ್ತಿಯಾಗುವ ಒಳಚರಂಡಿ ನೀರನ್ನು ಸಂಸ್ಕರಿಸಿ ಕೈಗಾರಿಕಾ ಉದ್ದೇಶಕ್ಕೆ ಬಳಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ಗೆ ಹಕ್ಕು ನೀಡುವ ಕುರಿತು.

**ಓದಲಾಗಿದೆ :**

1. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ : IADB/Engg/Sewage/13483/ 2012–13, ದಿನಾಂಕ : 16–1–2013.
2. ಸಚಿವ ಸಂಪುಟದ ಅನುಮತಿ ದಿನಾಂಕ : 25–2–2013.

**ಪ್ರಸ್ತಾವನೆ :**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ಯು ಒಂದು ಶಾಸನಬದ್ಧ ರಚಿತ (Statutory) ಸಂಸ್ಥೆಯಾಗಿದೆ. ಈ ಮಂಡಳಿಯು ಕೆಐಎಡಿ ಕಾಯ್ದೆ 1966ರ ಕಲಂ 5ರ ಅಡಿ ಸರ್ಕಾರಿ ಆದೇಶ ಸಂಖ್ಯೆ : ಸಿಐ 67 ಜಿಎಂಐ 66, ದಿನಾಂಕ: 20–6–1996 ರನ್ವಯ ರಚಿತವಾಗಿದ್ದು, ಕೆಐಎಡಿ ಕಾಯ್ದೆಯು, ಕೈಗಾರಿಕಾ ಪ್ರದೇಶ ಹಾಗೂ ಮೂಲಸೌಕರ್ಯಗಳ ಸಲುವಾಗಿ, ತ್ವರಿತಗತಿಯಲ್ಲಿ ಭೂಸ್ವಾಧೀನಪಡಿಸಿಕೊಳ್ಳಲು ಅನುವು ಮಾಡಿಕೊಟ್ಟಿದೆ. ಕೆಐಎಡಿಬಿಯು ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು ಎಲ್ಲಾ ಮೂಲಸೌಕರ್ಯಗಳೊಂದಿಗೆ ಬಡಾವಣೆಗಳನ್ನು ನಿರ್ಮಿಸುವುದರ ಜೊತೆಗೆ ವಿವಿಧ ರಾಜ್ಯ ಸರ್ಕಾರಿ ಸಂಸ್ಥೆಗಳ ಹಾಗೂ ಖಾಸಗಿ ಸಂಸ್ಥೆಗಳ ಯೋಜನೆ (SUC) ಗಳನ್ನು ಅನುಷ್ಠಾನಗೊಳಿಸಲು ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳುತ್ತದೆ ಮತ್ತು ರಸ್ತೆ, ನೀರು, ವಿದ್ಯುತ್ ಮುಂತಾದ ಕೈಗಾರಿಕಾ ಮೂಲಭೂತ ಸೌಲಭ್ಯಗಳನ್ನು ರಾಜ್ಯ ಅಥವಾ ಖಾಸಗಿ ಕ್ಷೇತ್ರದ ಸಹಭಾಗಿತ್ವದೊಂದಿಗೆ ಒದಗಿಸುತ್ತದೆ. ಈವರೆಗೆ ಕೆಐಎಡಿಬಿ ಒಟ್ಟು 136 ಕೈಗಾರಿಕಾ ಪ್ರದೇಶಗಳನ್ನು ಅಭಿವೃದ್ಧಿಪಡಿಸಿದೆ. ಎಲ್ಲಾ ಕೈಗಾರಿಕಾ ಪ್ರದೇಶಗಳಲ್ಲಿ ಅವಶ್ಯಕ ಮೂಲಭೂತ ಸೌಕರ್ಯಗಳಾದ ನೀರು, ವಿದ್ಯುತ್ ಮತ್ತು ಕ್ರಮಬದ್ಧ ಯೋಜನೆಯೊಂದಿಗೆ ಕೈಗಾರಿಕೆಯ ಸಮರ್ಪಕ ಬೆಳವಣಿಗೆಗೆ ಬೇಕಾದ ಇತರೆ ಅವಶ್ಯಕ ಮೂಲ ಸೌಕರ್ಯಗಳನ್ನು ಒದಗಿಸಲು ಕೆಐಎಡಿಬಿಯು ಬದ್ಧವಾಗಿದೆ. ನೀರಿನ ಸರಬರಾಜಿಗೆ ಸಂಬಂಧಿಸಿದಂತೆ, ಮಂಡಳಿಯು ಸರಬರಾಜು ಯೋಜನೆಯನ್ನು ಜಾರಿಗೆ ತಂದಿದ್ದು, ಲಭ್ಯವಿರುವ ಮೂಲಗಳಿಂದ ನೀರನ್ನು ಒದಗಿಸುತ್ತದೆ ಈವರೆಗೂ ಕೆಐಎಡಿಬಿ 9 ಕೈಗಾರಿಕಾ ಪ್ರದೇಶಗಳಲ್ಲಿ ನೀರನ್ನು ಸರಬರಾಜು ಯೋಜನೆಯನ್ನು ಜಾರಿಗೊಳಿಸಿದ್ದು, ಹೆಚ್ಚುವರಿಯಾಗಿ ವಿವಿಧ 10 ನೀರು ಸರಬರಾಜು ಯೋಜನೆಯನ್ನು ಕೈಗೆತ್ತಿಕೊಂಡಿದೆ. ಈ ಪ್ರಯತ್ನಗಳ ಹೊರತಾಗಿಯೂ, ಕೈಗಾರಿಕಾ ಪ್ರದೇಶಗಳಲ್ಲಿ ಸ್ಥಾಪಿತವಾಗಿರುವ ಕೈಗಾರಿಕೆಗಳ ನೀರಿನ ಬೇಡಿಕೆಯನ್ನು ಪೂರೈಸಲು ಕೆಐಎಡಿಬಿ ಗೆ ಕಷ್ಟವಾಗುತ್ತಿದ್ದು, ಚಿರಸ್ಥಾಯಿ ಹಾಗೂ ಅಂತರ್ಜಲ ಸಂಪನ್ಮೂಲದ ಹೆಚ್ಚಿನ ಬಳಕೆಯಿಂದಾಗಿ, ಕ್ಷಿಪ್ರಗತಿಯಲ್ಲಿ ನೀರಿನ ಕೊರತೆಯುಂಟಾಗಿರುವುದರಿಂದ, ಕೆಐಎಡಿಬಿ ಯು ಪರ್ಯಾಯ ನೀರಿನ ಸಂಪನ್ಮೂಲವನ್ನು ಕಂಡುಕೊಳ್ಳುವುದು ಅವಶ್ಯಕವಾಗಿದೆ. ಈ ಸಂಬಂಧ ರಾಜ್ಯದ ನಗರ ಮತ್ತು ಪಟ್ಟಣಗಳಲ್ಲಿ ವ್ಯರ್ಥವಾಗಿ ಹರಿಯುತ್ತಿರುವ ಒಳಚರಂಡಿ ನೀರನ್ನು ಕೈಗಾರಿಕಾ ಉದ್ದೇಶಕ್ಕಾಗಿ ಬಳಸಲು

ಯೋಗ್ಯವಾದ ನೀರನ್ನಾಗಿ ಪರಿವರ್ತಿಸುವುದಕ್ಕಾಗಿ ಸೆಕೆಂಡರಿ/ಟರ್ಷಿಯರಿ ಟ್ರೀಟ್‌ಮೆಂಟ್ ಪ್ಲಾಂಟ್‌ಗಳನ್ನು ಸ್ಥಾಪಿಸಲು ಉದ್ದೇಶಿಸಿದ್ದು, ಈ ಯೋಜನೆಗೆ ಸರ್ಕಾರದ ಅನುಮತಿ ಕೋರಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಅವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 14 ಎಸ್‌ಪಿಐ 2013, ಬೆಂಗಳೂರು, ದಿನಾಂಕ : 7–3–2013.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ನಗರ ಮತ್ತು ಪಟ್ಟಣಗಳಲ್ಲಿ ಉತ್ಪತ್ತಿಯಾಗುವ ಒಳಚರಂಡಿ ನೀರನ್ನು ಸಂಸ್ಕರಿಸಿ ಕೈಗಾರಿಕಾ ಉದ್ದೇಶಕ್ಕೆ ಬಳಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ)ಗೆ ಹಕ್ಕು ನೀಡಲಾಗಿದೆ. ಕೆಐಎಡಿಬಿ ಯು ಸಂದರ್ಭಕ್ಕೆ ತಕ್ಕಂತೆ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ (KUWSSB) ಹಾಗೂ ಬೆಂಗಳೂರು ನೀರು ಸರಬರಾಜು ಮಂಡಳಿ (BWSSB) ಗಳೊಂದಿಗೆ ಮತ್ತು ನಗರ ಸ್ಥಳೀಯ ಸಂಸ್ಥೆಗಳೊಂದಿಗೆ ಸಮಾಲೋಚಿಸಿ ಸೆಕೆಂಡರಿ/ಟರ್ಷಿಯರಿ ಟ್ರೀಟ್‌ಮೆಂಟ್ ಪ್ಲಾಂಟ್‌ಗಳನ್ನು ರಾಜ್ಯದ ವಿವಿಧ ಸೂಕ್ತ ಸ್ಥಳಗಳಲ್ಲಿ ತನ್ನ ಸ್ವಂತ ನಿಧಿಯಿಂದ (ಖರ್ಚಿನಿಂದ) ಸ್ಥಾಪಿಸಲು ಹಾಗೂ ಕೈಗಾರಿಕಾಭಿವೃದ್ಧಿ ಪ್ರದೇಶಗಳಿಗೆ ಸಂಸ್ಕರಿತ ನೀರನ್ನು ಸರಬರಾಜು ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಶಂಕರ್ ನಾಯಕ್ ಎಲ್.**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R. 369**

## ENERGY SECRETARIAT

**SUB :** Approval for tendering 130 MW Solar Power Projects under Solar Policy 2011-16 to meet the Renewable Purchase Obligations (RPO) with revision of minimum and maximum capacity allotment.

**READ :**
1. Solar Policy 2011-16 Notification No. EN 61 NCE 2011, dated : 1-7-2011
2. Government Order No. EN 61 NCE 2011(p1), Bangalore, Dated : 22-7-2011.
3. Government Order No. EN 180 NCE 2012, Bangalore, Dated : 14-12-2012.

**PREAMBLE :**

In the Notification dated 1-7-2011 read at (1) above, Government have published the Solar Policy 2011-16 to promote Solar Power as a part of the Renewable Energy in the State. KREDL has been appointed as the nodal agency for facilitating and implementing this policy.

As per clause (4) of the Solar Policy 2011-16, it is proposed to install 200 MW up to 2015-16, with an annual capacity addition of 40 MW each year till 2016. The minimum capacity shall be 3 MW and maximum capacity shall be 10 MW per project for Solar Photo Voltaic and Minimum Capacity Shall be 5 MW per project for Solar Thermal.

In the Government order read at (2) above, for procurement by ESCOMs, approval was accorded for combined bidding of 80MW Solar Power capacity for the year 2011-12 and 2012-13 in one slot.

KREDL through competitive bidding process had allotted 80 MWs of Solar Power Projects to various bidders. Out of this, Power Purchase Agreements (PPAs) for 70 MWs have been entered into by the respective ESCOMs.

In the Government order read at (3), approval was accorded for tendering of balance 130 MW Solar Projects and for revision of minimum capacity allotment of Solar PV capacity from 3 MW per project to 15 MW per project and maximum allotment from 10 MW per project to 100 MW per project.

The issue of continuing the existing minimum and maximum capacity allotment as per Solar Policy 2011-16 dated : 1-7-2011 for tendering of remaining 130 MW Solar Projects through competitive bidding is examined and the following order is issued.

**GOVERNMENT ORDER NO. EN 180 NCE 2012, BANGALORE, DATED : 5-3-2013.**

In partial modification of Government Order No. EN 180 NCE 2012, Bangalore, Dated : 14-12-2012, Government accords approval “To maintain the minimum capacity of 3 MW per project and maximum capacity of 10 MW per project in respect of Solar Photo Voltaic (SPV) projects and minimum capacity of 5 MW per project for Solar Thermal as per Clause (4) of the Karnataka Solar Policy 2011-16 issued on 1-7-2011, for tendering the remaining 130 MW Solar Power Projects as envisaged in the Karnataka Solar Policy 2011-16 on reverse bidding process by following MNRE guidelines and NVVNL bidding standards.”

KREDL, which is the nodal agency, is authorized to proceed further in the matter duly following KTPP Act.

This order is issued with the concurrence of Finance Department vide note No. FD 218 Exp-1/13 dated : 22-2-2013.

By Order and in the name of the Governor of Karnataka,

**A.A. CHAPPARBAND**

Under Secretary to Government,

Energy Department.

**P.R. 370**

**SC-30**

## REVENUE SECRETARIAT

**SUB :** Grant of Government Land for House National Disaster Response Force at Bangalore to Ministry of Home affairs, Government of India.

**READ :** Proceedings of the Meeting held on 19-12-2012 under the Chairmanship of the Chief Secretary to Government of Karnataka

**PREAMBLE :**

Under the National Disaster Management Act of 2005, the National Disaster Authority has been constituted. The Act provides for creating the National Disaster Response Force under section 44 of the Act, with the purpose of specialize response to threatening disaster situation or disaster.

It is decided at the national level that the National Disaster Response Force (NDRF) will House at least one company at the Metropolitan cities for providing urgent response during disasters/National calamities.

In the meeting held on 19-12-2012 under the Chairmanship of the Chief Secretary to Government of Karnataka it was decided formally to provide 4-00 acres of land to NDRF to House its unit in Bangalore. However since the NDRF is deploying only one company for the present, it was decided to allot 2-00 acres of land for the time being. It was suggested by the Secretary, Disaster Management to provide 2-00 acres of land in and around Bangalore. In case they require more land for increased number of companies than additional land may be allotted in future adjacent to this land proposed to be allotted now.

The Deputy Commissioner, Bangalore Urban has Identified a suitable land in Sy. No. 9 of Venkatala Village, Yelahanka Hobli, Bangalore North Taluk measuring 4-10 acres/guntas, out of which it is proposed to presently allot 2-00 acres of land for the said purpose.

**GOVERNMENT ORDER NO. RD 34 LGB 2013, BANGALORE, DATED : 6-3-2013.**

In view of the circumstances explained above Government are pleased to grant 2-00 acres of land out of 4-10 acres/guntas in Sy. No. 9 of Venkatala village, Yelahanka Hobli, Bangalore North Taluk, Bangalore to National Disaster Response Force (NDRF), Ministry of Home affairs, Governmet of India to House NDRF companies at Bangalore at **Present market rate of Rupees Three Crores per acre.**

The remaining 2-10 acres/guntas of land is reserved under section 71 of Karnataka Land Revenue Act 1964 for future requirements of National Disaster Response Force (NDRF) in case more companies are located in Bangalore.

By Order and in the name of the Governor of Karnataka,
**UMADEVI**
Under Secretary to Government,
Revenue Department (Land Grants-1).

**P.R. 374**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕರ್ನಾಟಕ ಆರೋಗ್ಯ ವ್ಯವಸ್ಥೆ ಆಯೋಗದ ವ್ಯಾಪ್ತಿಯಿಂದ ವೈದ್ಯಕೀಯ ಶಿಕ್ಷಣ ಇಲಾಖೆಯನ್ನು ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಆಕುಕ 96 ಸಿಜಿಎಂ 2012, ದಿನಾಂಕ : 15–9–2012.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಆರೋಗ್ಯ ಶಿಕ್ಷಣ ಗುಣಮಟ್ಟದಲ್ಲಿ ತ್ವರಿತ ಸುಧಾರಣೆಗಳನ್ನು ತರಲು ಹಾಗೂ ಆರೋಗ್ಯ ವಲಯದ ಸಂಶೋಧನೆಯಲ್ಲಿ ನಿರೀಕ್ಷಿತ ಪ್ರಗತಿ ಸಾಧಿಸಲು ಆರೋಗ್ಯ ವಲಯದಲ್ಲಿ ನೀಡುತ್ತಿರುವ ಸೇವೆಗಳ ತಾಂತ್ರಿಕ ಕೌಶಲ್ಯವನ್ನು ಬಲಪಡಿಸುವ ನಿಟ್ಟಿನಲ್ಲಿ ಅದರಲ್ಲೂ ವಿಶೇಷವಾಗಿ ಆರೋಗ್ಯ ಶಿಕ್ಷಣ ಮತ್ತು ಸಂಶೋಧನಾ ವಿಷಯಗಳಿಗೆ ಸಂಬಂಧಿಸಿದ ಅಂಶಗಳ ಬಗ್ಗೆ ಪರಿಶೀಲನೆ ನಡೆಸಿ, ಸರ್ಕಾರಕ್ಕೆ ವೈದ್ಯಕೀಯ ಶಿಕ್ಷಣದ ಗುಣಮಟ್ಟ ಸುಧಾರಿಸುವ ಹಾಗೂ ಆರೋಗ್ಯ ವ್ಯವಸ್ಥೆ ಕುರಿತು ನೀತಿ ಪ್ರಕಟಿಸಲು ಅನುವಾಗಲು ಸೂಕ್ತ ಶಿಫಾರಸ್ಸು/ಸಲಹೆಗಳನ್ನು ನೀಡಲು ಒಬ್ಬ ಪೂರ್ಣಕಾಲಿಕ ಅಧ್ಯಕ್ಷರು ಮತ್ತು ಸರ್ಕಾರವು ನಾಮನಿರ್ದೇಶನ ಮಾಡುವ ಮೂವರು ಅರೆಕಾಲಿಕ ಸರ್ಕಾರೇತರ ಸದಸ್ಯರುಗಳು ಹಾಗೂ ಸರ್ಕಾರದ ಇತರೇ ಪದನಿಮಿತ್ತ ಸದಸ್ಯರನ್ನೊಳಗೊಂಡ ಕರ್ನಾಟಕ ಆರೋಗ್ಯ ವ್ಯವಸ್ಥೆ ಆಯೋಗವನ್ನು ರಚಿಸಿ ಆದೇಶಿಸಿದೆ.

ಆದರೆ, ದೇಶದ ಎಲ್ಲಾ ರಾಜ್ಯಗಳಿಗೆ ಏಕರೂಪವಾಗಿ ಅನ್ವಯವಾಗುವಂತೆ ವೈದ್ಯಕೀಯ ಶಿಕ್ಷಣವು ಕೇಂದ್ರ ಸರ್ಕಾರದ ಆಡಳಿತ ವ್ಯಾಪ್ತಿಯಲ್ಲಿನ ಭಾರತೀಯ ವೈದ್ಯಕೀಯ ಪರಿಷತ್ ಮತ್ತು ದಂತ ವೈದ್ಯಕೀಯ ಪರಿಷತ್‌ಗಳ ಮಾನದಂಡಗಳನ್ವಯ ನಿಗದಿಗೊಳ್ಳಬೇಕಾಗಿರುವುದರಿಂದ ಹಾಗೂ ಈ ಬಗ್ಗೆ ರಾಜ್ಯ ಸರ್ಕಾರದ ಹಂತದಲ್ಲಿ ಯಾವುದೇ ಹಸ್ತಕ್ಷೇಪ ಮಾಡುವುದು ಸದರಿ ಸಂಸ್ಥೆಗಳ ಆಕ್ಷೇಪಣೆಗೆ ಗುರಿಯಾಗುವ ಸಾಧ್ಯತೆ ಇರುವುದರಿಂದ ವೈದ್ಯಕೀಯ ಶಿಕ್ಷಣ ಇಲಾಖೆಯನ್ನು ಕರ್ನಾಟಕ ಆರೋಗ್ಯ ವ್ಯವಸ್ಥೆ ಆಯೋಗದ ವ್ಯಾಪ್ತಿಯಿಂದ ಹೊರತುಪಡಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 42 ಎಂಪಿಎಸ್ 2012 (ಭಾಗ–1), ಬೆಂಗಳೂರು, ದಿನಾಂಕ : 11–3–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ವೈದ್ಯಕೀಯ ಶಿಕ್ಷಣ ಇಲಾಖೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಆರೋಗ್ಯ ವ್ಯವಸ್ಥೆ ಆಯೋಗದ ವ್ಯಾಪ್ತಿಯಿಂದ ಹೊರತುಪಡಿಸಿ ಆದೇಶಿಸಿದೆ.

ಮುಂದುವರಿದು, ಸದರಿ ಆಯೋಗವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಡಳಿತ ನಿಯಂತ್ರಣದಲ್ಲಿ ಮುಂದುವರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಸಾಯಿಬಾಬಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**P.R. 375**

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ.ಕೆ. ಬೇಕಲ್ ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ 09–03–2012.
2. ದಿನಾಂಕ: 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ.ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ: 04–2–2013.

**ಪ್ರಸ್ತಾವನೆ:**

ದಿನಾಂಕ: 02–03–2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ: 03–01–2013, 04–01–2013, 08–01–2013, 09–01–2013, 10–01–2013, 18–01–2013, 19–01–2013, 21–01–2013, 23–01–2013, 24–01–2013, 29–01–2013, 30–01–2013 ಹಾಗೂ 31–01–2013ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ₹ 1,26,000/– (ಒಂದು ಲಕ್ಷದ ಇಪ್ಪತ್ತಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ, 2013

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ.ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1 | Effective hearing (11 days) dated, 03-01-2013, 04-01-2013, 08-01-2013, 09-01-2013, 10-01-2013, 19-01-2013, 21-01-2013, 23-01-2013, 24-01-2013, 29-01-2013, 30-01-2013 & 31–01–2013 @ ₹ 10,000 per day | ₹ 1,20,000/- |
| 2 | Non-effective hearing one day 18-01-2012 @ ₹ 6,000 per day | ₹ 6,000/- |
| | **ಒಟ್ಟು ಮೊತ್ತ (ಒಂದು ಲಕ್ಷದ ಇಪ್ಪತ್ತಾರು ಸಾವಿರಗಳು ಮಾತ್ರ)** | **₹ 1,26,000/-** |

3) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–11–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

4) ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**PR. 390**

**SC - 50**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಐದು ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಯ ಬೋಧಕೇತರ ಸಿಬ್ಬಂದಿಗಳಿಗೆ ಅಧಿಕಾರಿ ವೇತನ ಸಮಿತಿ–2011ರ ಪರಿಷ್ಕೃತ ವೇತನವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ಎಫ್‌ಡಿ 7 ಎಸ್‌ಆರ್‌ಪಿ 2012, ದಿನಾಂಕ 21–04–2012.
2. ನಿರ್ದೇಶಕರು, ಆಯುಷ್ ಇವರ ಪತ್ರ ಸಂಖ್ಯೆ: ಆಯುಷ್/17ಸಿಬ್ಬಂದಿ(5)/2012–13, ದಿನಾಂಕ: 17–05–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ, ಸರ್ಕಾರವು ಅಧಿಕಾರಿ ವೇತನ ಸಮಿತಿ–2011ರ ಶಿಫಾರಸ್ಸುಗಳನ್ನು ಒಪ್ಪಿಕೊಂಡಿದ್ದು, ಸರ್ಕಾರದಿಂದ ಅನುದಾನ ಪಡೆಯುವ ಎಲ್ಲಾ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಅಧಿಕಾರಿ ವೇತನ ಸಮಿತಿಯು ಶಿಫಾರಸ್ಸು ಮಾಡಿರುವ ವೇತನ ಶ್ರೇಣಿಗಳನ್ನು ವಿಸ್ತರಿಸಲು, ಸಂಬಂಧಿಸಿದ ಆಡಳಿತ ಇಲಾಖೆಗಳು ಪ್ರತ್ಯೇಕ ಆದೇಶ ಹೊರಡಿಸುವಂತೆ ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಆಯುಷ್ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಐದು ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಗಳ ಬೋಧಕೇತರ ಸಿಬ್ಬಂದಿಗಳಿಗೆ ಅಧಿಕಾರಿ ವೇತನ ಸಮಿತಿ–2011 ಮಾಡಿರುವ ಶಿಫಾರಸ್ಸಿನನ್ವಯ ಪರಿಷ್ಕೃತ ವೇತನ ಶ್ರೇಣಿಯನ್ನು ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

### ಸರ್ಕಾರದ ಆದೇಶ ಸಂಖ್ಯೆ: ಆಕುಕ 197 ಪಿಟಿಡಿ 2012, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2013

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯ ನಿಯಂತ್ರಣದಲ್ಲಿರುವ ಈ ಕೆಳಗಿನ 05 ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಅದಕ್ಕೆ ಹೊಂದಿಕೊಂಡಿರುವ ಆಸ್ಪತ್ರೆಗಳ ಬೋಧಕೇತರ ಸಿಬ್ಬಂದಿಗಳಿಗೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಂತೆ, ಪರಿಷ್ಕೃತ ವೇತನ ಶ್ರೇಣಿಗಳನ್ನು ದಿನಾಂಕ: 01–04–2012 ರಿಂದ ಅನ್ವಯವಾಗುವಂತೆ ವಿಸ್ತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಇದರಿಂದಾದ ಹೆಚ್ಚುವರಿ ವೆಚ್ಚವನ್ನು ಸದರಿ ಸಂಸ್ಥೆಗಳಿಗೆ ಈಗಾಗಲೇ ಒದಗಿಸಲಾದ Grant-in-Aid ನಲ್ಲಿ ಭರಿಸಲು ಸೂಚಿಸಲಾಗಿದೆ.

| | | |
|---|---|---|
| 1. | ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ | ಬಿಜಾಪುರ |
| 2. | ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ | ಹುಬ್ಬಳ್ಳಿ |
| 3. | ಎಸ್.ಡಿ.ಎಂ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ | ಕುತ್ಪಾಡಿ, ಉಡುಪಿ |
| 4. | ಬಿ.ಎಂ.ಕೆ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ | ಬೆಳಗಾವಿ |
| 5. | ಡಿಜಿಎಂ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ | ಗದಗ |

ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2012ರಲ್ಲಿ ವಿಧಿಸಿರುವ ಷರತ್ತುಗಳನ್ನು ಈ ಮೇಲಿನ ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಗಳು ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/935/ವೆಚ್ಚ–5/2012, ದಿನಾಂಕ: 20–11–2012ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎನ್. ಹರಿಣಿಯಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**PR 397**
**SC - 20**

## ಕಂದಾಯ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕು, ನೆಲ್ಯಾಡಿ ಗ್ರಾಮದ ಸ.ನಂ. 186/1(ಪಿ)ರಲ್ಲಿ 7–09 ಎಕರೆ ಜಮೀನನ್ನು ವಿವೇಕಾನಂದ ವಿದ್ಯಾವರ್ಧಕ ಸಂಘ, ಪುತ್ತೂರು ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (1ಬಿ) ಪಿಡಿಆರ್/15/12–13 (ಸಿ.ನಂ. 79542) ಬಿ6 ದಿನಾಂಕ: 07–06–2012.

**ಪ್ರಸ್ತಾವನೆ:**

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ ಇವರು ಮೇಲೆ ಓದಲಾದ ಪತ್ರದಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನುಸಾರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ದಿನಾಂಕ 26–05–2011ರ ನಡವಳಿಯಲ್ಲಿ ಪುತ್ತೂರಿನ ವಿವೇಕಾನಂದ ವಿದ್ಯಾವರ್ಧಕ ಸಂಘಕ್ಕೆ ಸರ್ವೆ ನಂ. 186/1ರಲ್ಲಿ 20–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿರುತ್ತದೆ. ಸರ್ವೆ ನಂ. 186/1 ರಲ್ಲಿ 7–09 ಎಕರೆ ಜಮೀನು ಮಾತ್ರ ಲಭ್ಯವಿರುವುದಾಗಿ ತಹಸೀಲ್ದಾರ್‌ರವರು ವರದಿ ಮಾಡಿರುತ್ತಾರೆ. ಜಿಲ್ಲಾಧಿಕಾರಿಯವರು ಸಂಸ್ಥೆಯ ವಿಶ್ವಾಸಾರ್ಹತೆ ಬಗ್ಗೆ ಸ್ಥಿರೀಕರಿಸಿದ್ದು, ಸದರಿ ಸಂಸ್ಥೆಗೆ ಜಮೀನನ್ನು ನೀಡುವ ಕುರಿತು ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆ ಸ್ವೀಕರಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅರಣ್ಯ ಇಲಾಖೆಯಿಂದಲೂ ನಿರಾಕ್ಷೇಪಣಾ ಪತ್ರವನ್ನು ಪಡೆದಿರುತ್ತಾರೆ ಹಾಗೂ ಈ ಜಮೀನಿನ ಬಗ್ಗೆ ಯಾವುದೇ ಕಲಂ 50/53 ಅರ್ಜಿಗಳು ಬಾಕಿ ಇರುವುದಿಲ್ಲವೆಂದು ದೃಢೀಕರಿಸಲಾಗಿದೆ.

2. ಶ್ರೀ ವಿವೇಕಾನಂದ ವಿದ್ಯಾವರ್ಧಕ ಸಂಘವು, ಸಂಘಗಳ ಕಾಯ್ದೆ ಅಡಿಯಲ್ಲಿ ನೋಂದಾಯಿತ ಶಿಕ್ಷಣ ಸಂಸ್ಥೆಯಾಗಿರುತ್ತದೆ. ಸದರಿ ಸಂಘವು ಸರ್ಕಾರದಿಂದ ಯಾವುದೇ ಅನುದಾನವನ್ನು ಪಡೆದುಕೊಂಡಿಲ್ಲವೆಂದು ತೋರುತ್ತದೆ. ಈ ಸಂಘಕ್ಕೆ ಶಾಶ್ವತ ಕಟ್ಟಡದ ಅವಶ್ಯಕತೆಯಿರುವುದರಿಂದ ಜಮೀನು ಮಂಜೂರಾತಿ ಕೋರಿರುತ್ತಾರೆ.

3. ಈ ಜಮೀನಿನ ಮಾರ್ಗಸೂಚಿ ದರ ಎಕರೆಯೊಂದಕ್ಕೆ ರೂ. 1,10,000/– ಮತ್ತು ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ. 4,00,000/– ಇರುವುದಾಗಿ ಜಿಲ್ಲಾಧಿಕಾರಿಯವರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 99 ಎಲ್‌ಜಿಎ 2012, ಬೆಂಗಳೂರು ದಿನಾಂಕ: 21ನೇ ಫೆಬ್ರವರಿ, 2013**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕು, ನೆಲ್ಯಾಡಿ ಗ್ರಾಮದ ಸ.ನಂ. 186/1(ಪಿ1)ರಲ್ಲಿ 7–09 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮ (1969) ನಿಯಮ 21ರನ್ವಯ ವಿವೇಕಾನಂದ ವಿದ್ಯಾವರ್ಧಕ ಸಂಘ, ಪುತ್ತೂರು ಇವರಿಗೆ ಪ್ರಚಲಿತ ಮಾರ್ಗಸೂಚಿ ದರ ರೂ. 1,10,000–00 ಮಾರ್ಗಸೂಚಿ ಬೆಲೆಯ ಶೇ. 50 ರಷ್ಟನ್ನು ವಿಧಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

    1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
    2. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
    3. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
    4. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
    5. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
    6. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
    7. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
    8. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶಿವಲಿಂಗಯ್ಯ,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ.–2).

**P.R. 401**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಇನ್ಸ್‌ಟಿಟ್ಯೂಟ್ ಆಫ್ ಹೈಯರ್ ಎಜುಕೇಷನ್ ಅಂಡ್ ರಿಸರ್ಚ್ ಟ್ರಸ್ಟ್ ಇವರಿಗೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 109ರಲ್ಲಿ ಮಂಜೂರಾಗಿರುವ 7–00 ಎಕರೆ ಜಮೀನಿಗೆ ಬದಲಾಗಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 148ರಲ್ಲಿ 2–00 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 517 ಎಲ್‌ಜಿಬಿ 2010, ದಿನಾಂಕ: 13–05–2011.
2. ಪ್ರಾದೇಶಿಕ ಆಯುಕ್ತರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/175/12–13, ದಿನಾಂಕ: 09–11–2012.
3. ಜಿಲ್ಲಾಧಿಕಾರಿ, ಬೆಂಗಳೂರು ಇವರ ಪತ್ರ ಸಂ: ಎಲ್‌ಎನ್‌ಡಿ/(ಎಸ್).ಸಿಆರ್/194–2012–13, ದಿನಾಂಕ: 02–11–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ. ಸಂ. (1)ರ ದಿನಾಂಕ: 13–05–2011ರ ಆದೇಶದಲ್ಲಿ ಬೆಂಗಳೂರು ಇನ್ಸ್‌ಟಿಟ್ಯೂಟ್ ಆಫ್ ಹೈಯರ್ ಎಜುಕೇಷನ್ ಅಂಡ್ ರಿಸರ್ಚ್ ಟ್ರಸ್ಟ್ ಇವರಿಗೆ ಗುಂಜೂರು ಗ್ರಾಮದ ಸ.ನಂ. 109 ರಲ್ಲಿ 7–00 ಎಕರೆ ಜಮೀನನ್ನು ಮಾರ್ಗದರ್ಶಿ ಬೆಲೆಯ ಶೇಕಡ 50 ರಷ್ಟು ವಿಧಿಸಿ ಮಂಜೂರು ಮಾಡಲಾಗಿತ್ತು.

ಬೆಂಗಳೂರು ಇನ್ಸ್‌ಟಿಟ್ಯೂಟ್ ಆಫ್ ಹೈಯರ್ ಎಜುಕೇಷನ್ ಅಂಡ್ ರಿಸರ್ಚ್ ಟ್ರಸ್ಟ್ ಇವರು ಈಗಾಗಲೇ ಗುಂಜೂರು ಗ್ರಾಮದಲ್ಲಿ ಮಂಜೂರು ಮಾಡಲಾಗಿದ್ದ 7–00 ಎಕರೆ ಜಮೀನನ್ನು ಅರಣ್ಯ ಇಲಾಖೆಯವರು ಸಂಸ್ಥೆಗೆ ಹಸ್ತಾಂತರಿಸದೇ ಇರುವುದರಿಂದ ಸದರಿ ಜಮೀನಿನ ಬದಲಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ದೊಡ್ಡನಾಗಮಂಗಲ ಗ್ರಾಮ ಸ.ನಂ. 11 ರಲ್ಲಿನ ಜಮೀನನ್ನು ಅಥವಾ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 148 ರಲ್ಲಿ 2–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ದೊಡ್ಡನಾಗಮಂಗಲ ಗ್ರಾಮದ ಸ.ನಂ. 11 ರಲ್ಲಿ 6–21 ಎಕರೆ/ಗುಂಟೆ ಜಮೀನು ಲಭ್ಯವಿದ್ದು ಸದರಿ ಜಮೀನು ಮುಫತ್ ಕಾವಲ್ ಎಂದು ವರ್ಗೀಕೃತಗೊಂಡಿದ್ದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಿಂದ 9 ಕಿ.ಮೀ. ದೂರವಿರುತ್ತದೆಂದು ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 148 ರಲ್ಲಿ ಜಮೀನು ಲಭ್ಯವಿದ್ದು ಜಮೀನಿನ ಮಾರುಕಟ್ಟೆ ದರ ಪ್ರತಿ ಎಕರೆಗೆ ರೂ. 300.00 ಲಕ್ಷಗಳು ಮಾರ್ಗಸೂಚಿ ದರ ರೂ. 150.00 ಲಕ್ಷಗಳೆಂದು ತಿಳಿಸಿರುತ್ತಾರೆ.

ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ದೊಡ್ಡನಾಗಮಂಗಲ ಗ್ರಾಮ ಸ.ನಂ. 11 ರಲ್ಲಿನ ಜಮೀನನ್ನು ಕೋನಪ್ಪನ ಅಗ್ರಹಾರ ಗ್ರಾಮ ಪಂಚಾಯತಿಯವರು ಆಶ್ರಯ ಯೋಜನೆಯಡಿ ಮನೆಗಳನ್ನು ನಿರ್ಮಿಸಲು ಮಂಜೂರು ಮಾಡುವಂತೆ ಕೋರಿರುವುದರಿಂದ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 148 ರಲ್ಲಿನ ಜಮೀನನ್ನು ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 01 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ, 2013**

ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಕೂಡ್ಲು ಗ್ರಾಮದ ಸ.ನಂ. 148 ರಲ್ಲಿನ 2–00 ಎಕರೆ ಜಮೀನನ್ನು ಬೆಂಗಳೂರು ಇನ್ಸ್‌ಟಿಟ್ಯೂಟ್ ಆಫ್ ಹೈಯರ್ ಎಜುಕೇಷನ್ ಅಂಡ್ ರಿಸರ್ಚ್ ಟ್ರಸ್ಟ್ (ರಿ.) ಗೆ ಈ ಹಿಂದೆ ಆದೇಶ ಸಂಖ್ಯೆ: ಆರ್‌ಡಿ 517 ಎಲ್‌ಜಿಬಿ 2010 ದಿನಾಂಕ: 13–05–2011ರ ಮಂಜೂರಾತಿ ಆದೇಶವನ್ನು ರದ್ದುಗೊಳಿಸುತ್ತಾ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 19(1) ರನ್ವಯ ಮಾರುಕಟ್ಟೆ ದರ ಎಕರೆ ಒಂದಕ್ಕೆ ರೂ. 300.00 ಲಕ್ಷಗಳಂತೆ, ಈ ಕೆಳಕಂಡ ಷರತ್ತು/ನಿಬಂಧನೆಗಳಿಗೊಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿದೆ.

1. ಪ್ರಚಲಿತ ಮಾರುಕಟ್ಟೆ ದರದ ಶೇ. 10ರಷ್ಟು ವಿಧಿಸಿ ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10 ರಂತೆ ಹೆಚ್ಚಿಸುವ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು.
2. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
3. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ,
4. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
6. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
7. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
8. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
10. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
11. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂಮಂಜೂರಾತಿ–1)

P.R. 408

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆಯ ಶಿರಾ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಮುಸರ 2008, ದಿನಾಂಕ: 25–02–2009.

2. ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಮುಸರ 2008, ದಿನಾಂಕ: 25–11–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ತುಮಕೂರು ಜಿಲ್ಲೆಯ ಶಿರಾ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ/ಅಧಿಕಾರೇತರರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಶಿರಾ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ತುಮಕೂರು ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಶಿರಾ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ಪ್ರತ್ಯೇಕವಾಗಿ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ನಂತರ, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಕಂಡ ನಾಲ್ಕು ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿತ್ತು.

| | | |
|---|---|---|
| 1 | ಶ್ರೀ ಭೂತಯ್ಯ ಬಿನ್ ಚಿಕ್ಕಜ್ಜ, ಮೆಳೆಕೋಟೆ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಲಲಿತಮ್ಮ ಕೋಂ ಮಲ್ಲಿಕಾರ್ಜುನಯ್ಯ, ಕುಂಬಾರಹಟ್ಟಿ, ಶಿರಾ ನಗರ, ತುಮಕೂರು ಜಿಲ್ಲೆ (ಮಹಿಳೆ) | ಸದಸ್ಯರು |
| 3 | ಶ್ರೀ ಈರಣ್ಣ ಬಿನ್ ಬುಡ್ಡಾಭೂಮಿ, ತಿಮ್ಮಸಾಗರ, ಮದಲೂರು ಅಂಚೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ (ಪ.ಜಾತಿ) | ಸದಸ್ಯರು |
| 4 | ಶ್ರೀ ಡಿ. ರಾಮಯ್ಯ ಬಿನ್ ದೊಡ್ಡದಾಸಪ್ಪ, ತಾವರೆಕೆರೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ (ಪ.ಪಂಗಡ) | ಸದಸ್ಯರು |

ತದನಂತರ ಬೆಳವಣಿಗೆಯಲ್ಲಿ ರಾಜ್ಯ ಉಪಾಧ್ಯಕ್ಷರು, ಭಾರತೀಯ ಜನತಾ ಪಕ್ಷ ಇವರು ದಿನಾಂಕ: 19-06-2012ರಂದು ಸರ್ಕಾರಕ್ಕೆ ನೀಡಿರುವ ಪಟ್ಟಿಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 38 ಮುಸರ 2012, ಬೆಂಗಳೂರು, ದಿನಾಂಕ: 23ನೇ ಜನವರಿ, 2013**

ತುಮಕೂರು ಜಿಲ್ಲೆಯ ಶಿರಾ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ ಕಂಇ 18 ಮುಸರ 2008 ದಿನಾಂಕ: 25-11-2010ನ್ನು ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಸಂಪತ್ ಕುಮಾರ್, ಗಡ್ಡದ ದಾಸಪ್ಪ, ಹುಲಿಕುಂಟೆ, ಶಿರಾ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಲಲಿತಮ್ಮ ಕೋಂ ಮಲ್ಲಿಕಾರ್ಜುನ ಜಿ.ಎಂ., ಕೋಟೆ ಶಿರಾ | ಮಹಿಳೆ |
| 3 | ಶ್ರೀ ರಾಜಣ್ಣ ಬಿನ್ ನಾಗಪ್ಪ, ಮದಲೂರು ಗ್ರಾಮ & ಅಂಚೆ, ಕಸಬಾ ಹೋಬಳಿ, ಶಿರಾ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಡಿ. ರಾಮಯ್ಯ ಬಿನ್ ದೊಡ್ಡದಾಸಪ್ಪ, ತಾವರೆ ಕೆರೆ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ. ಶ್ರೀನಿವಾಸ ದೀಕ್ಷಿತ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಮುಜರಾಯಿ)

P.R. 410

## PERSONNEL AND ADMINISTRATIVE REFORMS SECRETARIAT

**Sub :** Deputation of IAS officers for attending 112th Induction Training Programme for IAS officers in LBSNAA, Mussoorie – sanction of course fee, library fee & other fees & TA & DA to Sri Meer Anees Ahmed, IAS – reg.

**Read :** 1. Government Order No. DPAR 429 SAS 2012, dated : 04-10-2012.

2. Letter dated : 04-10-2012 of Sri Meer Anees Ahmed, IAS

**Preamble :**

In Government Order dated : 04-10-2012 read at (1) above, sanction was accorded for deputation of Sri Meer Anees Ahmed, IAS and Sri M. V. Veerabhadraiah, IAS to attend the 112th Induction Training Programme for IAs officers to be held from 08-10-2012 to 30-11-2012 at LBSNAA, Mussoorie. The officers were sanctioned course fee, library fee & other fees as may be payable to the Academy and the expenditure on this account is to be debited to the same head of account to which their salary and other allowances are being charged at present and the officers are eligible to draw TA/DA as per rules.

Sri Meer Anees Ahmed, IAS is presently waiting for posting. The officer in his letter read at (2) above has requested to arrange for issue of demand draft for Rs. 2,00,000/- towards course fee, library fee etc., in favour of Director. Lal Bahadur Shastri National Academy of Administration and Rs. 50,000/- towards advance travelling allowance. Since, DPAR (Accounts-IRLA) would be paying the pay and allowances during the period of waiting, the course fee, library fee & other fee and also TA & DA have to be drawn from the DPAR (Accounts-IRLA) to facilitate the officer to attend the said training programme. Hence, the following order.

**GOVERNMENT ORDER No. DPAR 429 SAS 2012, BANGALROE, DATED 5th OCTOBER, 2012**

In continuation of the Government Order dated 04-10-2012 sanction is accorded for payment of course fee, library fee and other fees of Rs. 2,00,000/- as may be payable to the Director, Lal Bahadur Shastri National Academy of Administration, Mussoorie towards the 112th Induction training programme and TA & DA in respect of Sri Meer Anees Ahmed, IAS for attending the said induction training programme, by DP & AR (Accounts-IRLA).

**The amount of Rs. 2,00,000/- shall be paid in the forms of Crossed Demand Draft drawn in favors of *"The Director, Lal Bahadur Shastri National Academy of Administration, Mussoorie"* payable at the State Bank of India, LBSNAA, Mussoorie (Branch Code-2435).** The expenditure on this account shall be debited to the head of account 2052-090-002 & 2052-090-01-041 and paid to Sri Meer Anees Ahmed, IAS.

By Order and in the Name of the Governor of Karnataka
**U. H. NARAYANASWAMY,**
Under Secretary to Government,
DPAR (Services-I).

**P.R. 313**

## PERSONNEL AND ADMINISTRATIVE REFORMS SECRETARIAT

**Sub :** Appointment of Nodal Officers to facilitate investigation of cases registered as per orders of the Hon'ble Supreme Court of India in WP (Civil) No. 562/2009-reg.

**Read :** Letter No. RC-13/A/2012/CBI/ACB/BLR/865, Dated : 14-09-2012 of the Deputy Inspector General of Police, Central Bureau of Investigation, ACB, Bangalore.

**Preamble :**

In letter dated 14-09-2012 read at (1) above, the Deputy Inspector General of Police, Central Bureau of Investigation, Bangalore has stated that in pursuance of the order passed by the Hon'ble Supreme Court of India in WP (Civil) No. 562/2009 on 07-09-2012, the Central Bureau of Investigation has registered criminal cases vide RC 13(A)/2012, RC 14(A)/2012, RC 15(A)/2012, RC 16(A/2012, RC 17(A)/2012 & a Preliminary Enquiry vide No. PE 5(A)/2012 and have started investigation. It is stated that the investigation of these cases pertaining to export of 50 lakh metric tonne of iron ore worth Rs. 2,500 crores involves examination of large number of witnesses, travel, expenditure, man power etc. The Deputy Inspector General of Police, CBI, Bangalore has requested to nominate Nodal Officer for better co-ordination for the purpose of collection of documents, examination of witnesses, security arrangements, logistics like accommodation, vehicles, etc. at the State Level & at the district level at Bellary and Karwar in respect of Mines & Geology Department, Forest Department, Revenue Department & Police Department. The Government have examined the proposal and the following orders are issued.

**GOVERNMENT ORDER No. DPAR 612 SAS 2012, BANGALORE, DATED 4th OCTOBER, 2012**

In the circumstances explained in the preamble, Government nominates the following officers from the departments indicated against their names as Nodal Officers to facilitate the investigation of the criminal cases vide RC 13(A)/2012, RC 14(A)2012, RC 15(A)/2012RC 16(A)/2012, RC 17(A)/2012 & Preliminary Enquiry vide No. PE 5 (A)/2012 as per the orders of the Hon'ble Supreme Court of India in WP (Civil) No. 562/2009 on 07-09-2012.

| Sl. No. | Name of the officer appointed as Nodal Officer | Department |
|---|---|---|
| 1 | Sri H. R. Srinivasa, IAS<br>Director, Mines & Geology Department | Mines & Geology Department |
| 2 | Sri Prabhash Chandra Ray, IFS<br>Chief Conservator of Forests, Bellary | Forest Department |
| 3 | Deputy Commissioner, Bellary District, Bellary | Revenue Department |
| 4 | Superintendent of Police, Bellary District | Police Department |

By Order and in the Name of the Governor of Karnataka
**U. H. NARAYANASWAMY,**
Under Secretary to Government,
DPAR (Services-I).

**P.R. 314**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 711 ಸೇಅಸೆ 2012, ಬೆಂಗಳೂರು, ದಿನಾಂಕ : 27ನೇ ನವೆಂಬರ್, 2012**

**ವಿಷಯ:** ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಗಳು ರಜೆ ಅಥವಾ ವರ್ಗಾವಣೆಯಿಂದ ತೆರವಾದ ಸಂದರ್ಭಗಳಲ್ಲಿ ಜಿಲ್ಲಾಧಿಕಾರಿಗಳನ್ನು ಹೆಚ್ಚಿನ ಪ್ರಭಾರದಲ್ಲಿಡುವ ಬಗ್ಗೆ ಸೂಚನೆಗಳು.

ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳು ಜಿಲ್ಲಾ ಮಟ್ಟದಲ್ಲಿ ಪ್ರಮುಖ ಹುದ್ದೆಯಾಗಿದ್ದು, ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ರಜೆಯ ಮೇಲೆ ತೆರಳಿದಾಗ ಅಥವಾ ವರ್ಗಾವಣೆಯಿಂದ ಹುದ್ದೆ ಖಾಲಿ ಆದ ಸಂದರ್ಭಗಳಲ್ಲಿ ಜಿಲ್ಲಾ ಪಂಚಾಯತಿಯ ಉಪ ಕಾರ್ಯದಶಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿಡುವ ವ್ಯವಸ್ಥೆ ಚಾಲ್ತಿಯಲ್ಲಿದೆ. ಈ ಪದ್ಧತಿಯಿಂದ ಜಿಲ್ಲಾ ಪಂಚಾಯತಿಯ ಒಟ್ಟಾರೆ ಆಡಳಿತ ನಿರ್ವಹಣೆ ಹಾಗೂ ಜಿಲ್ಲಾಡಳಿತದೊಂದಿಗೆ ಸಮನ್ವಯತೆಗೆ ಉಂಟಾಗುವ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಅದನ್ನು ಸರಿಪಡಿಷುವ ದೃಷ್ಟಿಯಿಂದ ಈ ಹಿಂದೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅಂತಹ ಸಂದರ್ಭಗಳಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳಿಗೆ ಜಿಲ್ಲಾಧಿಕಾರಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿಡಲು ಪ್ರಸ್ತಾಪಿಸಿತ್ತು. ಈ ಪ್ರಸ್ತಾವನೆಯನ್ನು ಒಪ್ಪಿಕೊಂಡು ಅದನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬಹುತೇಕ ಸಂದರ್ಭಗಳಲ್ಲಿ ಜಿಲ್ಲಾಧಿಕಾರಿಗಳನ್ನು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳ ಹೆಚ್ಚುವರಿ ಪ್ರಭಾರದಲ್ಲಿರಿಸಲಾಗುತ್ತಿದೆ.

ಆದರೆ ಈ ವ್ಯವಸ್ಥೆಯು ಸಮರ್ಪಕವಾಗಿ ಅನುಷ್ಠಾನಗೊಳ್ಳುತ್ತಿಲ್ಲವಾದ್ದರಿಂದ ಹಾಗೂ ಬೇರೆ ಅಧಿಕಾರಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿ ಇಡುವುದರಿಂದ ಉಂಟಾಗಬಹುದಾದ ಆಡಳಿತದಲ್ಲಿನ ನ್ಯೂನತೆಗಳನ್ನು ಗಮನದಲ್ಲಿಟ್ಟುಕೊಂಡು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ರಜೆಯಲ್ಲಿ ತೆರಳಿದ ಸಂದರ್ಭಗಳಲ್ಲಿ (ಸಾಂದರ್ಭಿಕ ರಜೆ ಹೊರತುಪಡಿಸಿ) ಅಥವಾ ವರ್ಗಾವಣೆಯಿಂದ ಹುದ್ದೆ ಖಾಲಿ ಆದಲ್ಲಿ ಸದರಿ ಹುದ್ದೆಗಳಿಗೆ ಕಡ್ಡಾಯವಾಗಿ ಜಿಲ್ಲಾಧಿಕಾರಿಗಳನ್ನೇ ಹೆಚ್ಚುವರಿ ಪ್ರಭಾರದಲ್ಲಿ ನೇಮಿಸುವ ಬಗ್ಗೆ ಸೂಕ್ತ ಕಾರ್ಯನೀತಿಯನ್ನು ಅಳವಡಿಸಿ ಅನುಷ್ಠಾನಗೊಳಿಸುವ ಬಗ್ಗೆ ಕಂದಾಯ ಇಲಾಖೆಯ ಸಹಮತಿಯೊಂದಿಗೆ ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸಿದೆ.

ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳು ಜಿಲ್ಲಾ ಮಟ್ಟದಲ್ಲಿ ಪ್ರಮುಖ ಹುದ್ದೆಗಳಾಗಿದ್ದು, ಜಿಲ್ಲಾ ಪಂಚಾಯತಿಯ ಸುಗಮ ಆಡಳಿತ ನಿರ್ವಹಣೆ ದೃಷ್ಟಿಯಿಂದ ಹಾಗೂ ಜಿಲ್ಲಾಡಳಿತದೊಂದಿಗೆ ಸೂಕ್ತ ಸಮನ್ವಯ ಏರ್ಪಡಿಸುವ ದೃಷ್ಟಿಯಿಂದ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ರಜೆಯಲ್ಲಿ ತೆರಳಿದ ಅಥವಾ ವರ್ಗಾವಣೆಯಿಂದ ತೆರವಾದ ಸಂದರ್ಭಗಳಲ್ಲಿ ಸದರಿ ಹುದ್ದೆ ಖಾಯಂ ಆಗಿ ಭರ್ತಿ ಆಗುವವರೆಗೆ ಜಿಲ್ಲಾಧಿಕಾರಿಯನ್ನು ಸದರಿ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿರಿಸುವ ಕಾರ್ಯನೀತಿಯನ್ನು ಅನುಷ್ಠಾನಗೊಳಿಸುವುದು ಸೂಕ್ತವೆಂದು ನಿರ್ಣಯಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಭವಿಷ್ಯದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಗಳು ಅಧಿಕಾರಿ ರಜೆ ಮೇಲೆ ತೆರಳುವುದರಿಂದ ಅಥವಾ ವರ್ಗಾವಣೆಯಿಂದ ಖಾಲಿ ಆದಲ್ಲಿ ಸದರಿ ಹುದ್ದೆಯು ಖಾಯಂ ಆಗಿ ಭರ್ತಿ ಆಗುವವರೆಗೆ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಯಲ್ಲಿ ಕಡ್ಡಾಯವಾಗಿ ಹೆಚ್ಚುವರಿ ಪ್ರಭಾರದಲ್ಲಿರಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

ಈ ಸೂಚನೆಗಳನ್ನು ಸಂಬಂಧಪಟ್ಟವರು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಎಸ್. ವಿ. ರಂಗನಾಥ್,**
ಸರ್ಕಾರದ ಮುಖ್ಯ ಕಾರ್ಯದರ್ಶಿ

**P.R. 315**

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ನೀಲಾವರ ಗ್ರಾಮದ ಶ್ರೀ ಮಹಿಷ ಮರ್ದಿನಿ ದೇವಸ್ಥಾನಕ್ಕೆ ತುಲಾಭಾರದ ಸೇವೆಯಿಂದ ಬಂದ ಬೆಳ್ಳಿಯ ಚೂರುಗಳನ್ನು ಉಪಯೋಗಿಸಿಕೊಂಡು ಗರ್ಭಗುಡಿಯ ದ್ವಾರಕ್ಕೆ ಹೊಂದಿಕೊಂಡಿರುವ ಕಂಬಗಳಿಗೆ ಬೆಳ್ಳಿ ಮಡಾಯಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ : ಎಡಿಎಂ 11 ಇತರೆ ಸಿಆರ್ 74/2012-13, ದಿನಾಂಕ : 08-06-2012

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ : 02–11–2012ರಲ್ಲಿ, ಉಡುಪಿ, ಜಿಲ್ಲೆ, ಉಡುಪಿ ತಾಲ್ಲೂಕು, ನೀಲಾವರ ಗ್ರಾಮದ ಶ್ರೀ ಮಹಿಷಮರ್ದಿನಿ ದೇವಸ್ಥಾನವು 'ಎ' ವರ್ಗಕ್ಕೆ ಸೇರಿದ್ದು, ಅಧಿಸೂಚಿತ ಪಟ್ಟಿಯ ಪುಟ ಸಂಖ್ಯೆ : 711 ಕ್ರಮ ಸಂಖ್ಯೆ : 27 ರಲ್ಲಿ ಪ್ರಕಟಣೆಯಾದ ಧಾರ್ಮಿಕ ಸಂಸ್ಥೆಯಾಗಿದೆ. ಜಿಲ್ಲಾಧಿಕಾರಿಗಳ ಶಿಫಾರಸ್ಸಿನಂತೆ ದೇವಸ್ಥಾನಕ್ಕೆ ತುಲಾಭಾರ ಸೇವೆಯಿಂದ ಜಮೆಯಾದ ಸುಮಾರು 10,132 ಕೆ.ಜಿ. ತೂಕದ ಬೆಳ್ಳಿಯ ಗಟ್ಟಿ ಚೂರುಗಳನ್ನು ಕರಗಿಸಿ ಗರ್ಭಗುಡಿಯ ಮುಖ್ಯದ್ವಾರಕ್ಕೆ ತಾಗಿಕೊಂಡಿರುವ ಎರಡು ಕಲ್ಲು ಕಂಬಗಳ ಮೈಲ್ಮೆಗೆ ಬೆಳ್ಳಿ ತಗಡನ್ನು ಮಡಾಯಿಸುವ ಕಾಮಗಾರಿಯನ್ನು ನಿರ್ವಹಿಸುವ ಬಗ್ಗೆ ಅನುಭವಿ ಬೆಳ್ಳಿ ಕೆಲಸಗಾರರಿಂದ ಮಜೂರಿಯ ಸ್ಪರ್ಧಾತ್ಮಕ ದರಪಟ್ಟಿಯನ್ನು ಪಡೆಯಲು ಪ್ರಕಟಣೆ ನೀಡಿದ್ದು, ಸ್ವೀಕರಿಸಿದ ದರಪಟ್ಟಿಗಳಲ್ಲಿ ಅತಿ ಕಡಿಮೆ ದರ ನಮೂದಿಸಿದ ಶ್ರೀ ಬಿ. ಶ್ರೀಕಾಂತ ಆಚಾರ್ಯ ಪ್ರಭಾವಳಿ ಆರ್ಟ್ಸ್, ಕಲ್ಲು ಚಪ್ಪರ, ಬಾರ್ಕೂಡು ಇವರಿಂದ ಕನಿಷ್ಠ ಮಜೂರಿ ದರ ಕೆ.ಜಿ. ಒಂದಕ್ಕೆ ರೂ. 7,500–00 ಹಾಗೂ ವೇಸ್ಟೇಜ್ ಶೇ. 0.65 ಗ್ರಾಮ ರಂತೆ ಮಾಡಿಸಲು ಅನುಮತಿ ನೀಡಬೇಕೆಂದು ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಕೋರಿರುವರು.

ಸದರಿ ಪ್ರಸ್ತಾವನೆ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 86 ಮುಆಬಿ 2012, ಬೆಂಗಳೂರು, ದಿನಾಂಕ: 16ನೇ ಜನವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿ ತಾಲ್ಲೂಕು, ನೀಲಾವರ ಗ್ರಾಮದ ಶ್ರೀ ಮಹಿಷಮರ್ದಿನಿ ದೇವಾಲಯಕ್ಕೆ ತುಲಾಭಾರ ಸೇವೆಯಿಂದ ಬಂದ ಬೆಳ್ಳಿಯ ಚೂರುಗಳನ್ನು ಕರ್ನಾಟಕ ಧಾರ್ಮಿಕ ದತ್ತಿ ಕಾಯ್ದೆ ಅಧಿನಿಯಮ (1997)ರ ಕಲಂ 31(12)ರನ್ವಯ ಉಪಯೋಗಿಸಿಕೊಂಡು ಗರ್ಭಗುಡಿಯ ಮುಖ್ಯದ್ವಾರಕ್ಕೆ ತಾಗಿಕೊಂಡಿರುವ ಕಲ್ಲು ಕಂಬಗಳಿಗೆ ಬೆಳ್ಳಿ ಮಡಾಯಿಸಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ನಾರಾಯಣಪ್ಪ,**

ಪೀಠಾಧಿಕಾರಿ,

P.R. 316

ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ನಿಪ್ಪಾಣಿ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ಸಚಿಸುವ ಬಗ್ಗೆ

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಕಂಇ 70 ಮುಸರ 2009, ದಿನಾಂಕ : 25–02–2009

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ ನಿಪ್ಪಾಣಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ನಿಪ್ಪಾಣಿ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಳಗಾವಿ ಜಿಲ್ಲೆ. | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ನಿಪ್ಪಾಣಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ನಿಪ್ಪಾಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 37 ಮುಸರ 2012, ಬೆಂಗಳೂರು, ದಿನಾಂಕ: 07ನೇ ಜನವರಿ, 2013.**

ಬೆಳಗಾವಿ ಜಿಲ್ಲೆಯ ನಿಪ್ಪಾಣಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ವಿಲಾಸ ಹರೀಬಾ ಶಿಂಥೆ, ನಿಪ್ಪಾಣಿ | ಸಾಮಾನ್ಯ |
| 2 | ಶ್ರೀಮತಿ ಉಪಾಸನಾ ಸಚೀನ ಗಾರವೆ, ನಿಪ್ಪಾಣಿ | ಮಹಿಳೆ |
| 3 | ಶ್ರೀ ನಿಶಿಕಾಂತ ಮನ್ನಪ್ಪಾ ಕುರಳೂಪೆ, ನಿಪ್ಪಾಣಿ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಸುರೇಖಾ ಅಶೋಕ ಮಹಾಜನ, ನಿಪ್ಪಾಣಿ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಲಭ್ಯವಿರುವ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ವಿ. ಶ್ರೀನಿವಾಸ ದೀಕ್ಷಿತ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**P.R. 317**

## ಕಂದಾಯ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ಬಬಲೇಶ್ವರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಕಂಇ 69 ಮುಸರ 2008, ದಿನಾಂಕ : 25–02–2009

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬಿಜಾಪುರ ಜಿಲ್ಲೆಯ ಬಬಲೇಶ್ವರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಬಬಲೇಶ್ವರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬಿಜಾಪುರ ಜಿಲ್ಲೆ. | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬಿಜಾಪುರ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಬಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 25 ಮುಸರ 2011, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್, 2012.**

ಬಿಜಾಪುರ ಜಿಲ್ಲೆಯ ಬಬಲೇಶ್ವರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ರೇವಣಸಿದ್ದ ದಶರಥ, ಜಾಲಗೆರೆ, ಸಾ : ಸಾರವಡ | ಸಾಮಾನ್ಯ |
| 2 | ಶ್ರೀಮತಿ ಭಾರತಿ ವೆಂಕಪ್ಪ, ಧನ್ಯಾಳ, ಸಾ : ಕುಮಟೆ | ಮಹಿಳೆ |
| 3 | ಶ್ರೀ ಸಿದ್ದರಾಮ ಕಾಶಿನಾಥ ತಳಕೆರಿ, ಸಾ : ಹೊನ್ನವಾಡ | ಪರಿಶಿಷ್ಟ ಜಾತಿ |
| 4 | ಶ್ರೀ ಬಸವರಾಜ ಮಲಕಗೊಂಡ, ಸಾ : ಬೆಳ್ಳುಬ್ಬಿ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ವಿ. ಶ್ರೀನಿವಾಸ ದೀಕ್ಷಿತ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**P.R. 318**

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ, ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ರಿ.ಸ.ನಂ. 343ರಲ್ಲಿ 1000 ಎಕರೆ ಜಮೀನನ್ನು ಮೆ॥ ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ. ಲಿ., ಬೆಂಗಳೂರು ಇವರಿಗೆ ಸೌರಶಕ್ತಿ ಪಾರ್ಕ್ ಅಭಿವೃದ್ಧಿಪಡಿಸಲು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಆದೇಶ ಸಂಖ್ಯೆ: ಸಿ1/336/ಎಸ್‌ಪಿಐ/2012, ದಿನಾಂಕ: 30–10–2012.

2. ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ/ಸಿಆರ್.350/2012–13, ದಿನಾಂಕ: 10–01–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿಯ ಕುದಾಪುರ, ವರವು ಕಾವಲ್, ರಾಮದುರ್ಗ, ನೆಲಗೆಟ್ಟಹಳ್ಳಿ ಗ್ರಾಮಗಳಲ್ಲಿ ರೂ. 248.12 ಕೋಟಿ ಹೂಡಿಕೆಯೊಂದಿಗೆ ಸೌರಶಕ್ತಿ ಪಾರ್ಕ್ ಅಭಿವೃದ್ಧಿಪಡಿಸಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಮೆ॥ ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ. ಲಿ., ಬೆಂಗಳೂರು ಇವರಿಗೆ ತಾತ್ವಿಕ ಅನುಮೋದನೆ ನೀಡಿರುತ್ತದೆ. ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವನ್ನು ನೋಡಲ್ ಏಜೆನ್ಸಿಯಾಗಿ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಚಿತ್ರದುರ್ಗ ಇವರು ಮುಖ್ಯಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 17–12–2012ರಂದು ನಡೆದ ಸಭೆಯ ತೀರ್ಮಾನದಂತೆ ಹಾಗೂ ಮೆ॥ ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ. ಲಿ., ಬೆಂಗಳೂರು ಇವರ ಮನವಿಯಂತೆ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವು ಕಾವಲು ಗ್ರಾಮದ ಸ. ನಂ. 343ರಲ್ಲಿ 1000–00 ಎಕರೆ ಜಮೀನನ್ನು ಮೆ॥ ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ. ಲಿ., ಬೆಂಗಳೂರು ಇವರಿಗೆ ಸೌರಶಕ್ತಿ ಪಾರ್ಕನ್ನು ಅಭಿವೃದ್ಧಿಪಡಿಸಲು ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯಂತೆ ವರವು ಕಾವಲು ಗ್ರಾಮದ ಸ.ನಂ. 343ರಲ್ಲಿ 6893.16 ಎಕರೆ ಜಮೀನಿದ್ದು, ಅದರಲ್ಲಿ 4033.10 ಎಕರೆ ಈಗಾಗಲೇ ವಿಲೇ ಆಗಿರುತ್ತದೆ. ಮಂಜೂರಾತಿಗೆ ಲಭ್ಯವುಳ್ಳ ಜಮೀನಿನ ವಿವರ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಿಸ್ತೀರ್ಣ | | ಎಕರೆ/ಗುಂಟೆ |
|---|---|---|---|
| 1 | ಒಟ್ಟು ವಿಸ್ತೀರ್ಣ | | 6893.16 |
| 2 | ಈಗಾಗಲೇ ವಿಲೇಯಾದ ಭೂಮಿ | | 4033.10 |
| | ಉಳಿಕೆ ಜಮೀನು | | 2860.06 |
| 3 | ಭದ್ರಾ ಮೇಲ್ದಂಡೆ ಯೋಜನೆಗೆ ಬಳಕೆ ಮಾಡುವ ಅರಣ್ಯ ಜಮೀನಿಗೆ ಬದಲಾಗಿ ಪರ್ಯಾಯ ಜಮೀನು ಮಂಜೂರಾತಿಗೆ ಪ್ರಸ್ತಾವನೆ | 901 | |
| 4 | ಕೆ.ಆರ್.ಆರ್.ಪಿ | 350 | |
| | ಒಟ್ಟು | 1251 | |
| 5 | ನಿಖರವಾಗಿ ಲಭ್ಯವಿರುವ ಜಮೀನು 2860.06–1251 | | 1609.06 |

ಸದರಿ ಪ್ರಸ್ತಾಪಿತ ಜಮೀನು ಬರಡು ಭೂಮಿಯಾಗಿದ್ದು, ಮೇವಿಗಾಗಿ ಸದರಿ ಜಮೀನನ್ನು ಅವಲಂಭಿಸಿರುವುದಿಲ್ಲ. ಈ ಜಮೀನು ಅತಿಕ್ರಮಣಕ್ಕೆ ಒಳಪಟ್ಟಿರುವುದಿಲ್ಲ ಹಾಗೂ ಯೋಜಿತ ಉದ್ದೇಶಕ್ಕೆ ಪ್ರಾಶಸ್ತ್ಯವಾದ ಜಮೀನಾಗಿರುತ್ತದೆ. ವರ್ಷದ ಹನ್ನೆರಡು ತಿಂಗಳು ಸೌರಶಕ್ತಿಯಿಂದ ವಿದ್ಯುತ್ ಉತ್ಪಾದಿಸಲು ಯಾವುದೇ ಬಾಧಕಗಳಿರುವುದಿಲ್ಲ. ದಿ. ನಂಜುಂಡಪ್ಪ ವರದಿ ಪ್ರಕಾರ ಚಳ್ಳಕೆರೆ ತಾಲ್ಲೂಕು ಹಿಂದುಳಿದ ಪ್ರದೇಶ ಎಂದು ಗುರುತಿಸಲ್ಪಟ್ಟಿರುವುದರಿಂದ ಈ ಯೋಜನೆ ತಾಲ್ಲೂಕಿಗೆ ಒಂದು ವರದಾನವಾಗಿರುತ್ತದೆ. ಸದರಿ ಪ್ರದೇಶದ ಸುತ್ತಮುತ್ತಲೂ ಪ್ರತಿಷ್ಠಿತ ಸಂಸ್ಥೆಗಳು ಕಾರ್ಯಾರಂಭ ಮಾಡಿರುವುದರಿಂದ ಈ ಸಂಸ್ಥೆಗಳಿಗೂ ವಿದ್ಯುತ್ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಸಾಮಾಜಿಕ ಯೋಜನೆಯಡಿ ಪರಿಗಣಿಸಿ ಪ್ರೋತ್ಸಾಹಿಸುವುದು ಅವಶ್ಯವೆಂದು ಜಿಲ್ಲಾಧಿಕಾರಿಯವರು ವರದಿ ನೀಡಿರುತ್ತಾರೆ.

ವರವು ಕಾವಲು, ಉಳ್ಳಾರ್ತಿ ಕಾವಲು, ಖುದಾಪುರ ಕಾವಲಿನಲ್ಲಿ ಈಗಾಗಲೇ ವಿವಿಧ ಸಂಸ್ಥೆಗಳಿಗೆ ಜಮೀನು ಮಂಜೂರಾತಿ ಮಾಡಿರುವುದರ ವಿರುದ್ಧ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ 26144 ರಿಂದ 26147/2012 (ಕೆಎಲ್ಆರ್.–ಆರ್ಐಎಸ್) ನಲ್ಲಿ ಸಾಮಾಜಿಕ ಹಿತಾಸಕ್ತಿಯ ಅರ್ಜಿ ದಾಖಲಾಗಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ/13/ಎಲ್‌ಜಿಸಿ/2013, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969ರ ನಿಯಮ 27ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಯ್ಕನಹಟ್ಟಿ ಹೋಬಳಿ, ವರವುಕಾವಲು ಗ್ರಾಮದ ಸರ್ವೆ ನಂ. 343ರಲ್ಲಿ 1000 ಎಕರೆ ಜಮೀನನ್ನು ಮೆ॥ ಸಾಗಿಟಾರ್ ವೆಂಚರ್ಸ್ ಇಂಡಿಯಾ ಪ್ರೈ ಲಿಮಿಟೆಡ್, ಬೆಂಗಳೂರು ಇವರಿಗೆ ಸೌರಶಕ್ತಿ ಪಾರ್ಕ್ ಅಭಿವೃದ್ಧಿಪಡಿಸಲು ಕರ್ನಾಟಕ ಭೂ ಕಂದಾಯ ನಿಯಮಗಳ 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಜಮೀನಿನ ಪ್ರಚಲಿತ ಮಾರುಕಟ್ಟೆ ದರ ಪ್ರತಿ ಎಕರೆಗೆ ರೂ. 45,000/–ರಂತೆ ಶೇ. 10ರಷ್ಟು ಗುತ್ತಿಗೆ ದರ ವಿಧಿಸಿ, ಎರಡು ವರ್ಷಗಳಿಗೊಮ್ಮೆ ಶೇ. 10 ರಷ್ಟು ಹೆಚ್ಚಿಸುವ ಹಾಗೂ ಪ್ರತಿ ಎಕರೆಗೆ ಪರಿವರ್ತನಾ ಶುಲ್ಕ ರೂ. 21,780/–ರ ಜೊತೆಗೆ ನಿಯಮಾನುಸಾರ ಪಾವತಿಸಬೇಕಾದ ಇತರೆ ಶುಲ್ಕಗಳನ್ನು ವಿಧಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳ 1969 ನಿಯಮ 19(3)(ಬಿ)ರನ್ವಯ 30 ವರ್ಷಗಳ ಗುತ್ತಿಗೆ ಅವಧಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

1) ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

2) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.

3) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

4) ಸದರಿ ಗುತ್ತಿಗೆ ಮಂಜೂರಾತಿಯು ಉಚ್ಚನ್ಯಾಯಾಲಯದಲ್ಲಿ ಬಾಕಿ ಇರುವ ರಿಟ್ ಅರ್ಜಿ ಸಂಖ್ಯೆ : 26144 ರಿಂದ 26147/2012 ಹಾಗೂ ಇತರ ಸಂಬಂಧಿತ ಅರ್ಜಿಗಳ ಮೇಲೆ ನ್ಯಾಯಾಲಯವು ನೀಡಬಹುದಾದ ಅಂತಿಮ ಆದೇಶಕ್ಕೊಳಪಟ್ಟಿರುತ್ತದೆ.

5) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ, ಉಪಗುತ್ತಿಗೆಗೆ ಕೊಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

6) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಸರ್ಕಾರದ ವಶಕ್ಕೆ ಪಡೆಯಲಾಗುವುದು.

7) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೆ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

8) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

9) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 319**

## ಕಂದಾಯ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕೊಪ್ಪಳ ತಾಲ್ಲೂಕಿನ ಕೊಪ್ಪಳ ಗ್ರಾಮದ ಸ.ನಂ. 452ರಲ್ಲಿ 2–00 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ ಕೊಪ್ಪಳ ಇವರಿಗೆ ನೀಡುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು ಕೊಪ್ಪಳ ಇವರ ಪತ್ರ ಸಂಖ್ಯೆ: ಕಂದಾಯ/ಭೂಮಿ/ಕ.ಸಂ.–1100/26/2011–12, ದಿನಾಂಕ: 24–11–2011 ಮತ್ತು ದಿನಾಂಕ : 03–07–2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಕೊಪ್ಪಳ ಇವರು ದಿನಾಂಕ : 24–11–2011ರಂದು ಕೊಪ್ಪಳ ಜಿಲ್ಲೆಯ ಸ.ನಂ. 452ರಲ್ಲಿ ಲಭ್ಯವಿರುವ 14.28 ಎಕರೆ ಪೊರಂಬೋಕು ಜಮೀನಿನ ಪೈಕಿ 10–00 ಎಕರೆ ಜಮೀನನ್ನು ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ, ಕೊಪ್ಪಳ ಇವರಿಗೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವಿತ ಜಮೀನು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿರುವುದಿಲ್ಲ ಹಾಗೂ ಈ ಜಮೀನು ನಗರದಿಂದ 3 ಕಿ.ಮೀ. ಒಳಗಿರುತ್ತದೆ ಎಂಬುದಾಗಿ ವರದಿಸಿರುತ್ತಾರೆ. 2009ರಲ್ಲಿ ಟ್ರಸ್ಟ್ ಆಗಿ ಕೊಪ್ಪಳದಲ್ಲಿ ನೊಂದಾಯಿಸಲಾಗಿರುವ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ, ಕೊಪ್ಪಳ ನಗರದಲ್ಲಿ ಹಾಸ್ಟೆಲ್ ಸೌಲಭ್ಯಗಳೊಂದಿಗೆ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 25–00 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಕ್ರಮಸಂಖ್ಯೆ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಕೊಪ್ಪಳರವರು ದಿನಾಂಕ: 03–07–2012 ರಂದು ಸದರಿ ಜಮೀನು ಕಲ್ಲುಬಂಡೆಗಳಿಂದ ಕೂಡಿದ್ದು, ಸಾಗುವಳಿಗೆ ಯೋಗ್ಯವಿರುವುದಿಲ್ಲ. ಹಾಗೂ ಯಾವುದೇ ಸರ್ಕಾರಿ ಕಛೇರಿಗಳನ್ನು ನಿರ್ಮಾಣ ಮಾಡಲು ಅನುಕೂಲವಾಗುವುದಿಲ್ಲವೆಂದು ತಿಳಿಸುತ್ತಾ, ಲಭ್ಯವಿರುವ 14.28 ಎಕರೆ ಜಮೀನಿನಲ್ಲಿ 10–00 ಎಕರೆ ಜಮೀನನ್ನು ಮಂಜೂರು ಮಾಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಕೊಪ್ಪಳ ಜಿಲ್ಲೆಯು ಒಂದು ಹೊಸ ಜಿಲ್ಲೆಯಾಗಿರುವುದರಿಂದ 2–00 ಎಕರೆ ಜಮೀನನ್ನು ಮಾತ್ರ ಗುತ್ತಿಗೆ ಆಧಾರದ ಮೇಲೆ ಈ ಸಂಸ್ಥೆಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಲಾಗಿದೆ. ಹಾಗೂ ಪ್ರಸ್ತಾಪಿತ ಜಮೀನಿನ ಮಾರ್ಗಸೂಚಿ ದರ ಪ್ರತಿ ಎಕರೆಗೆ ರೂ. 3,75,000/– ಹಾಗೂ ಮಾರುಕಟ್ಟೆ ದರ ರೂ. 4,05,820/– ಇರುತ್ತದೆ ಎಂಬುದಾಗಿ ವರದಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 50 ಎಲ್‌ಜಿಆರ್ 2011, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕೊಪ್ಪಳ ಗ್ರಾಮದ ಸ.ನಂ. 452ರಲ್ಲಿ ಲಭ್ಯವಿರುವ 14.28 ಎಕರೆ ಜಮೀನಿನ ಪೈಕಿ 2–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(2)(ಎ)ರನ್ವಯ ಮಾರುಕಟ್ಟೆ ಬೆಲೆಯ ಶೇಕಡ 10ರಷ್ಟು ಹಾಗೂ ನಿಯಮಾನುಸಾರ, ಇನ್ನಿತರ ದರಗಳನ್ನು ವಿಧಿಸಿ, ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು, 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ ಕೊಪ್ಪಳ ಇವರಿಗೆ ಶಿಕ್ಷಣ ಸಂಸ್ಥೆಗಳ ಸ್ಥಾಪನೆಯ ಉದ್ದೇಶಕ್ಕಾಗಿ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 320**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು